**ಅರೆಬಾಸೆ ಮುಡ್ಪು**

ಅರೆಬಾಸೆ ತಿಂಗ ಪತ್ರಿಕೆ

ಅರೆಬಾಸೆ ಕಲೆ, ಸಾಹಿತ್ಯ, ಸಂಸ್ಕೃತಿಗೊಂದು ಕೈಗನ್ನಡಿ

ಅರೆಬಾಸೆ ಉಳ್ಸಿಕೆ ನಮ್ಮೊಟ್ಟಿಗೆ ಕೈ ಜೋಡ್ಸಿ

ವಾರ್ಷಿಕ ಚಂದಾ ರೂ.300

ಹೆಚ್ಚಿನ ಮಾಹಿತಿಗೆ ಸಂಪರ್ಕಿಸಿ 9535615759 / 8971066293

ನಮ್ಮ ಪತ್ರಿಕೆಗೆ ಕತೆ, ಕವನ, ಹನಿಗವನ, ಚುಟುಕು, ಲೇಖನ, ಅನುಭವ ಕಥನ, ಪ್ರವಾಸ ಕಥನ

ಹಂಗೆ ಪತ್ರಿಕೆ ಬಗ್ಗೆ ನಿಮ್ಮ ಅನ್ಸಿಕೆ ಅಭಿಪ್ರಾಯ ಗಳ್ನ ಬರೆಯವು ಸಂಪೂರ್ಣ ಅರೆಬಾಸೆಲಿ ಬರ್ದ್

**ಅರೆಬಾಸೆ ಮುಡ್ಪು ಪತ್ರಿಕೆ**

C/o ವಸಂತ ಟ್ರೇಡರ್ಸ್

ಬೈಪಾಸ್ ರಸ್ತೆ, ಗೋಣಿಕೊಪ್ಪ –571213

ವಾಟ್ಸಾಪ್‌ಲಿ ಕಳ್ಸಿರೆ: 9535615759 । ಮಿಂಚಂಚೆಲಿ ಕಳ್ಸಿರೆ: arebasepatrike@gmail.com ಗೆ ಕಳ್ಸಿ ಕೊಡಿ

ನಿರೀಕ್ಷಿಸಿ ಮುಂದಿನ ಸಂಚಿಕೆಂದ

ಲೇಖಕಿ ಜಯಮ್ಮ ಚೆಟ್ಟಿಮಾಡ ಅವರ 'ಹಳಬರ ಜೋಳಿಗೆ' ಅಂಕಣ ಸುರು ಆದೆ.

ನಮ್ಮ ನಿಮ್ಮ ಹಿರಿಯರ ಬಾಳ್ನ ಅನುಭವಗಳ ಸಾರ ಈ ಹಳಬರ ಜೋಳಿಗೆ.

# ಸಂಪಾದಕೀಯ

ಅಂತೂ ಬಹು ವರ್ಷದ ಕನಸ್ ನೆನ್ಸಾಗಿ ಅರೆಬಾಸೆ ಮುಡ್ಪು ಪತ್ರಿಕೆ ಹೊರಗೆ ಬಾತ್. ನೋಡಿ, ಕೇಳಿ, ಓದಿದವ್ ಒಳ್ಳೆ ಅಭಿಪ್ರಾಯನೇ ವ್ಯಕ್ತಪಡ್ಸೊಳೊ. ಎಲ್ಲವ್ಕೂ ಹೃದಯಪೂರ್ವಕ ಧನ್ಯವಾದಗ.

ಸುರುನ ಸಂಚಿಕೆ ಇದಾಗಲೇ ಎಲ್ಲರ ಕೈ ಸೇರುಟು ತ ಗ್ಯಾನ ಮಾಡ್ನೆ. ಕೆಲವ್ಕೆ ವಿಳಾಸ ಅದಲ್ ಬದಲ್ ಇಲ್ಲೆ ತಪ್ಪು ಇದ್ದ ಕಾರಣ ಎರಡೆರಡ್ ಸಲ ಕಳ್ಸಿಕೆ ಆತ್. ಅಂತೂ ವಿಳಾಸ ಕೊಟ್ಟ ಎಲ್ಲವ್ಕೂ ಪತ್ರಿಕೆ ತಲ್ಪುಟು ತಾ ನೆನ್ಸಿನೆ. ಈಗ ಎರಡನೇ ಸಂಚಿಕೆ ನಿಮ್ಮ ಮುಂದೆ ಉಟ್ಟು ಈ ಸಲನೂ ಕಥೆ, ಕವನ, ಸುದ್ದಿಗಳ್ಗೆ ಪ್ರಾಧ್ಯಾನತೆ ಕೊಡಲಾವ್ತು.

ಈಗಾಗಲೆ ಇಬ್ಬರು ಈ ಪತ್ರಿಕೆಗೆ ಸ್ಥಿರ ಶೀರ್ಷಿಕೆ ಅಡಿಲಿ ಲೇಖನ ಬರ್ದ್ ಕೊಡಿಕೆ ಇಚ್ಛೆ ವ್ಯಕ್ತಪಡ್ಸೊಳೊ. ಅದರ್ಲಿ ಜಯಮ್ಮ ಚೆಟ್ಟಿಮಾಡ ಅವರ "ಹಳಬರ ಜೋಳಿಗೆ" ಹಂಗೆ ಸುರೇಶ್ ಅವು ಸೇನೆಲಿ ಇರ್ವ ನಮ್ಮ ಜನಾಂಗದವ್ರ ಪರಿಚಯ ಮಾಡಿಕೊಟ್ಟವೆ. ಈ ಲೇಖನಗ ಮುಂದಿನ ಸಂಚಿಕೆಂದ ಇದ್ ಪ್ರಕಟ ಆದೆ. ಹಂಗೆನೆ ಹಲವರ ಸಲಹೆಯಂಗೆ ಈ ಸಂಚಿಕೆನ ಮುಖಪುಟ ಬಣ್ಣದ ಮುಖಪುಟ ಆವ್ತು.

ದೇಸಲಿ ನಡ್ದ ನೋಟು ರದ್ದತಿ ಭಾರೀ ಸಂಚಲನ ಮೂಡ್ಸುಟು. ಕಪ್ಪು ಹಣ ಇಟ್ಟವ್ಕೆ ಅಂದ್‌ಂದ ನಿದ್ದೆ ಇಲ್ಲದಂಗೆ ಆವ್ತು. ರೈತಾಪಿಗಳಾದ ನಮ್ಮವ್ಕೆ ಇದರ್‌ಂದ ಅಂತ ದೊಡ್ಡ ಪರಿಣಾಮ ಏನ್ ಆತ್ಲೆ ತಾ ಗ್ಯಾನ ಮಾಡ್ನೆ. ಹಂಗೆನೆ ನಮ್ಮ ಜನಾಂಗದ ಹಬ್ಬ ಆದ ಹುತ್ತರಿ ಹಬ್ಬ ಡಿಸೆಂಬರ್ 13ರಂದ್ ಆಚರಿಸಲಾತ್. ಎಲ್ಲವೂ ದೂರದ ಊರ್‌ಗಳ್ಲಿ ಉದ್ಯೋಗಲಿ ಇರವೂ ಸ ಈ ಒಂದು ಹಬ್ಬಕ್ಕೆ ಬಂದ್ ಸೇರಿ ನೆಂಟ್ರ್ ಮನೆಯವರೊಟ್ಟಿಗೆ ಸೇರಿ ಕುಸಿಲಿ ಕಾಲ ಕಳ್ದಿರ್ವರಿ. ಹಂಗೆನೆ ಪಾಶ್ಚಾತ್ಯ ಹೊಸ ವರ್ಷದ ಆಚರಣೆ ಸ ಭಾರಿ ಸದ್ದ್ ಗದ್ದಲಲಿ ಆವ್ತು. ಈ ಸಂಚಿಕೆ ನಿಮ್ಮ ಕೈ ಸೇರ್ಕನ ನಾಡಿನ ಹಬ್ಬ ಸಂಕ್ರಾತಿ ಕೂಡ ಮುಗ್ದಿದ್ದದೆ.

ಮುಂದಿನ ಸಂಚಿಕೆ ಹೊಸ ಆಯಾಮಲಿ, ಹೊಸ ರೂಪಲಿ, ಹೊಸ ವಿಷಯಗಳ ಕೂಡಿಕಂಡ್ ಮೂಡಿಬಂದದೆ. ಏನೇ ತಪ್ಪು ಒಪ್ಪುಗ, ಸಲಹೆ ಸೂಚನೆಗ ಇದ್ದರೆ ಮುಲಾಜಿಲ್ಲದೆ ನಾವ್ಗೆ ತಿಳ್ಸಿ ತಿದ್ದಿ ಸರಿಪಡ್ಸಿಕಂಡ್ ಮುನ್ನಡೆಯನೊ.

ಇಂತಿ,

**ವಿನೋದ್**

# ಅರೆಬಾಸೆ ತಿಂಗಗಳ ಪರಿಚಯ

ಹಿಂದೂ ಪಂಚಾಗ, ಮುಸಲ್ಮಾನ ತಿಂಗಳು, ಆಂಗ್ಲರ ತಿಂಗಳು ಹಿಂಗೆ ಬೇರೆ ಬೇರೆ ಇದ್ದಂಗೆ ನಮ್ಮ ಅರೆಬಾಸೆ ಅವ್ಕೆ ಸ ಅವರ್ದೇ ಆದ ತಿಂಗಗ ಉಟ್ಟು. ಆಯಾ ತಿಂಗಳ್ಲಿ ಬರ್‍ವ ಹಬ್ಬಗ ಮತ್ತೆ ಆ ತಿಂಗಳ್ಲಿ ಸುರು ಆಗುವ ಕೆಲ್ಸಗಳ ವಿವರ ಹಿಂಗುಟ್ಟು

1. **ಸುಗ್ಗಿ:** ಈ ತಿಂಗ ಮೀನ ಸಂಕ್ರಮಣ ಕಳ್ದ ಮಾರ್‍ನೆ ದಿನಂದ ಸುರಾದೆ. ಮೇಷ ಸಂಕ್ರಮಣ ಮುಟ್ಟ ಅಂದರೇ (ಮಾರ್ಚ್ 15ರ ಮೇಲೆ ಏಪ್ರಿಲ್ 15ರ ಮುಟ್ಟ). ಈ ತಿಂಗಳ್ಲಿ ಯುಗಾದಿ ಹಬ್ಬ ಬಂದದೆ. ಎಲ್ಲ ಊರ್‌ಗಳ್ಲಿ ಹಬ್ಬಗ ಆದವೆ. ಈ ತಿಂಗ ಕಾಫಿ, ಮೆಣ್ಸ್ ಎಲ್ಲ ಕೊಯ್ದ್ ಸೊಲ್ಪ ಆರಾಮ್‌ಲಿ ಇರ್‍ವ ತಿಂಗ ಇದ್. ಈ ತಿಂಗಳ್ಲಿ ಮದ್ವೆ ಜಂಬರಗ ಜಾಸ್ತಿ.

2.**ಪೊಗ್ಗು:** ಈ ತಿಂಗ ಮೇಷ ಸಂಕ್ರಮಣ ಕಳ್ದ ಮಾರ್‍ನೆ ದಿನಂದ ಸುರಾದೆ. ಅಂದರೆ ವೃಷಭ ಸಂಕ್ರಮಣ ಮುಟ್ಟ ಬಂದದೆ (ಏಪ್ರಿಲ್ 15ರ ಮೇಲೆ ಮೇ 15ರ ಮುಟ್ಟ). ಈ ತಿಂಗಳ್ಲಿ ಗದ್ದೆಗೆ ಎತ್ತ್ ಕಟ್ಟುವ ಬಿಸು ಹಬ್ಬ ಬಂದದೆ. ಊರ್ ಹಬ್ಬಗ ಸ ಸುರು ಆದೆ. ಈ ತಿಂಗಳ್‌ಂದ ಕೃಷಿ ಚಟುವಟಿಕೆಗ ಸುರು ಆದವೆ.

3. **ಬೇಸಗೆ** : ಈ ತಿಂಗ ವೃಷಭ ಸಂಕ್ರಮಣ ಕಳ್ದ ಮಾರ್‍ನೆ ದಿನಂದ ಸುರಾದೆ. ಮಿಥುನ ಸಂಕ್ರಮಣ ಮುಟ್ಟ ಈ ತಿಂಗ ಬಂದದೆ (ಮೇ 15ರ ಮೇಲೆ ಜೂನ್ 15ರ ಮುಟ್ಟ). ಈ ತಿಂಗಳ್ಲಿ ಗದ್ದೆ ಕೆಲ್ಸ ತೇಳ್ರೆ ನಾಟಿ ಕೆಲ್ಸ ಸುರು ಆದೆ.

4. **ಕಾರ್ತಿಂಗ:** ಈ ತಿಂಗ ಮಿಥುನ ಸಂಕ್ರಮಣ ಕಳ್ದ ಮಾರ್‍ನೆ ದಿನಂದ ಸುರಾದೆ ತೇಳ್ರೆ ಕರ್ಕಟ ಸಂಕ್ರಮಣ ಮುಟ್ಟ ಈ ತಿಂಗ ಬಂದದೆ (ಜೂನ್ 15ರ್‌ಂದ ಜುಲೈ 15ರ ಮುಟ್ಟ). ಈ ತಿಂಗಳ್ಲಿ ಗದ್ದೆಗೆ ಬೀಜ ಹಾಕುದು ಹಂಗೆ ದೆವ್ವಗಳ್ಗೆ ಕಲಾಯ ಕೊಡ್ದು ನಡ್ದದೆ.

5. **ಆಟಿ:** ಈ ತಿಂಗ ಕರ್ಕಟ ಸಂಕ್ರಮಣ ಕಳ್ದದ ಮಾರ್‍ನೆ ದಿನಂದ ಸುರಾಗಿ ಸಿಂಹ ಸಂಕ್ರಮಣ ಮುಟ್ಟ ಇದ್ದದೆ (ಜುಲೈ 15ರ್‌ಂದ ಆಗಸ್ಟ್ 15ರ ಮುಟ್ಟ). ಈ ತಿಂಗಕ್ಕೆ ತುಂಬಾನೇ ವಿಶೇಷ ಉಟ್ಟು. ಈ ತಿಂಗಳ್ಲಿ ಯಾವುದೇ ಶುಭ ಕಾರ್ಯ ಇರ್‌ದುಲೆ. ಈ ತಿಂಗಳ್‌ಲಿ ಪಣ್‌ಪುಳಿಗೆ ತುಂಬಾ ಮಹತ್ವ ಉಟ್ಟು. ಆಟಿ 18 ತುಂಬಾ ವಿಶೇಷ ಆಗಿದ್ದದೆ.

6. **ಸೋಣ:** ಈ ತಿಂಗ ಸಿಂಹ ಸಂಕ್ರಮಣ ಕಳ್ದ ಮಾರ್‍ನೆ ದಿನಂದ ಕನ್ಯಾ ಸಂಕ್ರಮಣ ಮುಟ್ಟ ಬಂದದೆ (ಆಗಸ್ಟ್ 15ರ್‌ಂದ ಸೆಪ್ಟಂಬರ್ 15ರ ಮುಟ್ಟ). ಈ ತಿಂಗಳ್ಲಿ ಗೌರಿ ಗಣೇಶ ಹಬ್ಬ, ಸೋಣ 12 ಹಂಗೆ ಕೊಡಗ್‌ನ ವಿಶೇಷ ಕೈಲ್‌ಮೂರ್ತ ಹಬ್ಬ ಬಂದದೆ. ಈ ತಿಂಗಳ್ಲಿ ನಾಟಿ ಕಳೆ ಕೆಲ್ಸ ಇದ್ದದೆ.

7. **ನಿರ್ನಾಲ್:** ಈ ತಿಂಗ ಕನ್ಯಾ ಸಂಕ್ರಮಣ ಕಳ್ದ ಮಾರ್‍ನೆ ದಿನಂದ ತುಲಾ ಸಂಕ್ರಮಣ ಮುಟ್ಟ ಬಂದದೆ (ಸೆಪ್ಟಂಬರ್ 15ರ್‌ಂದ ಅಕ್ಟೋಬರ್ 15ರ ಮುಟ್ಟ). ಈ ತಿಂಗಳ್ಲಿ ತುಂಬಾ ಹಬ್ಬಗ, ಪೂಜೆಗ ಬಂದವೆ. ಹಂಗೆ ವಿಜಯ ದಶಮಿ ಹಬ್ಬ ಇದೇ ತಿಂಗಳ್ಲಿ ಬಂದದೆ.

8. **ಬೆಳ್ತಿಂಗ:** ಈ ತಿಂಗ ತುಲಾ ಸಂಕ್ರಮಣ ಕಳ್ದ ಮಾರ್‍ನೆ ದಿನಂದ ವೃಶ್ಚಿಕ ಸಂಕ್ರಮಣ ಮುಟ್ಟ ಬಂದದೆ (ಅಕ್ಟೋಬರ್ 15ರ್‌ಂದ ನವೆಂಬರ್ 15ರ ಮುಟ್ಟ). ಈ ತಿಂಗಳ್ಲಿ ಕಾವೇರಿ ಸಂಕ್ರಮಣ (ತುಲಾ ಸಂಕ್ರಮಣ), ದೀಪಾವಳಿ ಹಬ್ಬಗ ಬಂದವೆ. ಕಾಫಿ ತೋಟಗಳ್ಲಿ ಹೆರ್ತೆ ಕೆಲ್ಸ ಹಂಗೆ ಭತ್ತದ ಕೆಲವ್ ತಳಿಗ ಕೊಯ್ಲಿಗೆ ಬಂದದೆ.

9. **ಜಾಳ್ತೆ** : ಈ ತಿಂಗ ವೃಶ್ಚಿಕ ಸಂಕ್ರಮಣ ಕಳ್ದ ಮಾರ್‍ನೆ ದಿನಂದ ಧನು ಸಂಕ್ರಮಣ ಮುಟ್ಟ ಬಂದದೆ (ನವೆಂಬರ್ 15ರ್‌ಂದ ಡಿಸೆಂಬರ್ 15ರ ಮುಟ್ಟ). ಈ ತಿಂಗಳ್ಲಿ ತುಂಬಾ ವಿಶೇಷ ಆಗಿ ಕೊಡಗ್‌ನ ಸಾಂಪ್ರದಾಯಿಕ ಸುಗ್ಗಿ ಹಬ್ಬ ಹುತ್ತರಿ ಹಬ್ಬ ಬಂದದೆ. ಸುಬ್ರಮಣ್ಯ ಷಷ್ಠಿ, ಕಾಕೋಟು ಪರಂಬು ಹಬ್ಬ ಬಂದದೆ. ಬೆಳೆ ಕೆಲ್ಸನೂ ಸುರು ಆದೆ.

10. **ಪೆರಗಾಳ್ದ:** ಈ ತಿಂಗ ಧನು ಸಂಕ್ರಮಣ ಕಳ್ದ ಮಾರ್‍ನೆ ದಿನಂದ ಮಕರ ಸಂಕ್ರಮಣ ಮುಟ್ಟ ಬಂದದೆ (ಡಿಸೆಂಬರ್ 15ರ್‌ಂದ ಜನವರಿ 15ರ ಮುಟ್ಟ). ಈ ತಿಂಗಳ್ಲಿ ಪಾಕ ಹಬ್ಬ ಹಂಗೆನೆ ಸುಮಾರ್ ಊರ್ ಹಬ್ಬಗ ಸುರಾದವೆ. ಮಕರ ಸಂಕ್ರಮಣ ಬಂದದೆ. ಬೆಳೆ ಕೊಯ್ಲ್ ಕೆಲ್ಸಸ ಸುರಾದೆ, ಕಾಫಿ ತೋಟಲಿ ಕಾಫಿನೂ ಹಣ್ಣಾಕೆ ಸುರು ಆದೆ.

11. **ಪೊನ್ನಿ:** ಈ ತಿಂಗ ಮಕರ ಸಂಕ್ರಮಣ ಕಳ್ದ ಮಾರ್‍ನೆ ದಿನಂದ ಕುಂಭ ಸಂಕ್ರಮಣ ಮುಟ್ಟ ಬಂದದೆ (ಜನವರಿ 15ರ್‌ಂದ ಫೆಬ್ರವರಿ 15ರ ಮುಟ್ಟ). ಈ ತಿಂಗಳ್ಲಿ ಕೊಯ್ಲ್ ಕೆಲ್ಸ, ಒಕ್ಲ್ ಕೆಲ್ಸ ಎಲ್ಲಾ ಹಂಞ ಮುಗ್‌ದಿದ್ದದೆ, ಕೆಡ್ಡಾಸ ಹಬ್ಬನೂ ಇದೇ ತಿಂಗಳ್ಲಿ ಬಂದದೆ.

12. **ಮಾಯಿ** : ಈ ತಿಂಗ ಕುಂಭ ಸಂಕ್ರಮಣ ಕಳ್ದ ಮಾರ್‍ನೆ ದಿನಂದ ಮೀನ ಸಂಕ್ರಮಣ ಮುಟ್ಟ ಬಂದದೆ. ಎಲ್ಲಾ ಕಡೇನು ಎಲ್ಲಾ ದೇವಸ್ಥಾನಗಳ್ಲಿ ಹಬ್ಬಗ ಆದವೆ. ಕೊಡಗ್‌ನ ಕುಲದೇವ್ರು, ಮಳೆ ದೇವ್ರು, ಬೆಳೆ ದೇವ್ರುತ ಹೆಸ್ರ್ ತಕಂಡಿರುವ ಪಾಡಿಶ್ರೀ ಇಗ್ಗುತಪ್ಪ ದೇವ್ರ ಹಬ್ಬ ಇದೇ ತಿಂಗಳ್ಲಿ ಬಂದದೆ. ಶಿವರಾತ್ರಿನೂ ಬಂದದೆ. ಬೆಳೆ ಕೆಲ್ಸ ಮುಗ್ದ್ ಕಾಫಿ ತೋಟಗಳ್ಲಿ ಕಾಫಿ ಕೊಯ್ಯೋದು, ಒಳ್ಳೆಮೆಣ್ಸ್ ಕೆಲ್ಸ ಸುರಾದೆ. ಹಂಗೆನೆ ಮದ್ವೆ ಜಂಬರಗ ಜಾಸ್ತಿ ಈ ತಿಂಗಳ್‌ಂದ ಸುರಾದೆ.

**–ಉಳುವಾರನ ರೋಶನ್**

# ನಮ್ಮ ಬೇರ್ ಹುಡುಕಾಟಲಿ

ಕರಾವಳಿ ಬಂದರ್‌ಗಳ್‌ಂದ ಎರಡನೇ ಶತಮಾನಂದ ರೋಮ್‌ನೊಟ್ಟಿಗೆ, ಹಂಗೆ ಏಳನೇ ಶತಮಾನಂದ ಅರಬರ ಮುಖೇನ ಅಂತರಾಷ್ಟ್ರೀಯ ವ್ಯಾಪಾರ ನಡಿತಾ ಇತ್ತ್. ಹೊಯ್ಸಳ ಮತ್ತೆ ವಿಜಯನಗರದ ಸಮಯಲಿ ಅಂತರಾಷ್ಟ್ರೀಯ ವ್ಯಾಪಾರ ವ್ಯವಹಾರಗಳ್ಗೆ ಹೆಚ್ಚಿನ ಒತ್ತು ಸಿಕ್ಕಿತ್ತ್. ಆಲೂಪರ್ ಮತ್ತೆ ಬಲ್ಲಾಳರ್ ವಿಜಯನಗರದ ಮಾಂಡಲೀಕರಾಗಿದ್ದೋ. ವಿಜಯನಗರ ಸಾಮ್ರಾಜ್ಯಕೆ ಈ ಪ್ರದೇಶ ಅತ್ಯಂತ ಬೆಲೆ ಬಾಳುವ ಉಪಯುಕ್ತವಾಗಿ ಬೇಕಲ್, ಕುಂಬ್ಳೆ, ಮಂಗ್ಳೂರು, ಬಾರಕೂರು ಹಿಂಗೆ ಬಂದರ್‌ಗಳ್‌ಂದ ಪಾಶ್ಚಿಮಾತ್ಯ, ಹಂಗೆ ಚೀನ ದೇಶದೊಟ್ಟಿಗೆ ಆಮದು ಮತ್ತೆ ರಫ್ತ್ ಬೆಳ್ತ್. ಇಟಲಿಯ ಪ್ರವಾಸಿ ವರ್ತಮನು 1506ಲಿ ಮಂಗ್ಳೂರ್‌ಗೆ ಭೇಟಿ ಕೊಟ್ಟಿರ್‌ಕನ ಅರವತ್ತ್ ಹಡ್ಗ್‌ನ ಉತ್ತಮ ದರ್ಜೆಯ ಅಕ್ಕಿ ಹಂಗೆ ಸಂಭಾರ ಜೀನಸುಗಳ್ನ ತುಂಬಿ ರಫ್ತು ಮಾಡಿಕೆ ಸಿದ್ದ ಆಗಿತ್ತ್ ತ ಬರ್ದುಟ್ಟು.

ಈ ಸಮಯಲಿ ರಾಜರ ಸೈನ್ಯಲಿ ಹಂಗೆ ಶ್ರೀಮಂತರ ವ್ಯವಹಾರಕೆ ಕುದುರೆಗಳ್ನ ಬಹಳಷ್ಟ್ ಬಳಸ್ತಾ ಇದ್ದೋ. ಆದರೆ ಕುದುರೆಗಳ ಸಂತಾನೋತ್ಪತಿ ಮಾಡೋ ಕ್ರಮ ಭಾರತದವ್ಕೆ ಗೊತ್ತಿತ್ಲೆ. ಆದ್ರಿಂದ ಕುದುರೆಗಳ್ನ ಪರ್ಷಿಯಾಂದ ಆಮದು ಮಾಡಿಕಣ್ತಾ ಇದ್ದೋ. ಕರಾವಳಿ ಬಂದರ್‌ಗಳ್‌ಂದ ಬಯಲ್ ಸೀಮೆ ರಾಜ್ಯಗಳ್ಗೆ ಆಮದು ಮತ್ತೆ ರಫ್ತ್ ಸರಂಜಾಮುಗಳ್ನ ತಕಂಡ್ ಹೋಕೆ ಬಿಸ್ಲೆ, ಶಿರಾಡಿ, ಬಂಗಾಡಿ ಕಡ್ತಿಕಲ್ಲ್, ಕೊಡಗ್‌ನ ತೊಡಿಕಾನ ಹಿಂಗೆ ಬೇರೆ ಬೇರೆ ರಹದಾರಿಗಳ್ಲಿ ಎತ್ತಿನ ಗಾಡಿಯ ಕೆರಾವಾನ್ ಮೂಲಕ ಸಾಗಿಸ್ತಾ ಇದ್ದೋ ತಾ ಅರಬ್ ಪ್ರವಾಸಿಗ ಆದ ಬತೂತ ಮತ್ತೆ ಅಬ್ದುಲ್ ರಜಾಕ್ ನಮೂದಿಸಿಯೊಳೋ.

ವಿಜಯನಗರ ಸಾಮ್ರಾಜ್ಯ ತಾಳಿಕೋಟೆ ಕದನ (1565 ಎ.ಡಿ.) ಲಿ ಸೋತ ಮೇಲೆ ತನ್ನ ಸಾಮರ್ಥ್ಯನ ಕಳ್ಕಂಡ ಮೇಲೆ ಅವರ ಮಾಂಡಲೀಕರಾದ ಕೆಳದಿ (ಇಕ್ಕೇರಿ) ನಾಯಕರ್ಗ್ಗ ದಕ್ಷಿಣ ಕನ್ನಡದ ಮೇಲೆ ತಮ್ಮ ಹತೋಟಿನ ಮುಂದುವರ್‍ಸುದು ಅನಿವಾರ್ಯ ಆತ್. ಆದರೆ ಇಕ್ಕೇರಿ ನಾಯಕರಿಗೆ ಈ ದಿಕ್ಕ್‌ಲಿ ಕರಾವಳಿ ಪ್ರದೇಶದ ಅಲೂಪರ್‌ಂದ ಪ್ರಬಲ ವಿರೋಧ ಬರ್‍ವ ಸಾಧ್ಯತೆಯಿತ್ತ್. ಎರಡೂ ಹಿಂದಿನ ಮಾಂಡಲೀಕ ರಾಜವಂಶಗ ಸ್ವತಂತ್ರವಾಗಿ ತಮ್ಮ ತಮ್ಮ ಪ್ರಭಾವ ವಿಸ್ತರ್‍ಸುವ ಆತುರಲ್ಲಿದ್ದೋ. ಇಕ್ಕೇರಿ ನಾಯಕರ ಅಧೀನದಲಿ ಇದ್ದ ಪುತ್ತೂರು, ಸುಳ್ಯ, ಬೆಳ್ತಂಗಡಿ ಸೀಮೆಗಳ್ಲಿ ಅವರ ಅಧೀನರಾಗಿ ಸ್ತ್ರೀ ಪ್ರಧಾನ ಸಂತತಿಯ ಅಷ್ಠ ಬಲ್ಲಾಳರ್ ಆಳ್ತಾ ಇದ್ದೋ.

ಬಯಲ್ ಸೀಮೆನ ನಾಯಕರ್ಗ್ಗೆ ತಮ್ಮ ಸೈನ್ಯಕ್ಕೆ ಬೇಕಾದ ಕುದುರೆಗಳ್ನ ಪರ್ಷಿಯಾಂದ ಆಮದು ಹಂಗೆ ಇತರೆ ಸಾಮಾನ್‌ಗಳ್ನ ರಫ್ತು ಇತ್ಯಾದಿ ಅಂತರಾಷ್ಟ್ರೀಯ ವಾಣಿಜ್ಯ ವ್ಯವಹಾರಕ್ಕೆ ದಕ್ಷಿಣ ಕನ್ನಡದ ಮೇಲೆ ಮತ್ತೆ ಸಂಪರ್ಕ ಹತೋಟಿ, ಇಟ್ಟುಕೊಳ್ವ ಅವಶ್ಯಕತೆ ಇತ್ತ್. ಅದೇ ರೀತಿಲಿ ಶೃಂಗೇರಿ ಮಠ ದಕ್ಷಿಣ ಕನ್ನಡಲಿ ಪ್ರಚಲಿತಲಿದ್ದ ಜೈನ ಹಂಗೆ ವೈಷ್ಣವ ಧರ್ಮನ ಹಿಮ್ಮೆಟ್ಟಿಸ್ವ ವಿಚಾರ ಇದ್ದ್, ಇಕ್ಕೇರಿ ನಾಯಕರ್ಗೂ ಶೃಂಗೇರಿ ಮಠಕ್ಕೂ ಒಂದು ಸಮನ್ವಯದ ಯೋಜನೆ ರೂಪುಗೊಂಡತ್.

ಇಕ್ಕೇರಿ ಸಂಸ್ಥಾನದ ಚಿಕ್ಕಮಗಳೂರು, ಹಾಸನ ಮತ್ತೆ ಕೊಡಗ್‌ಲಿ ಇದ್ದ, ಇಕ್ಕೇರಿ ನಾಯಕರ್ಗೆ ರಕ್ತ ಸಂಬಂಧಿಗ ಆದ ಹಂಗೆ ಶೈವ ಸಂಪ್ರದಾಯಸ್ಥರಾದ ಗೌಡರ ಆಯ್ದ ಕುಟುಂಬಗಳ್ನ ಒಟ್ಟಿಗೆ ಸೇರ್‍ಸಿ ದಕ್ಷಿಣ ಕನ್ನಡ ಕಡೆಗೆ ಕಳ್ಸಿಕೆ ಏರ್ಪಾಡ್ ಆತ್. ಗೌಡ ಜನಾಂಗ ಭತ್ತದ ಕೃಷಿಲಿ ಪರಿಣಿತರ್, ಕೆಳದಿ ಅರಸರ ನಂಬಿಕಸ್ಥ ಪ್ರಜೆಗ, ಶೈವ ಮೂಲದ ಆದಿನಾಥ ಪಂತಕ್ಕೆ ಸೇರ್ದವು, ಲೋಕಭೈರವೇಶ್ವರ ಆರಾಧಕರ್, "ಪಿತೃ ಪ್ರಧಾನ" ಸಂತತಿಯವು. ಹಿಂಗೆ ದಕ್ಷಿಣ ಕನ್ನಡಲಿ ಶೈವ ಸಂಪ್ರದಾಯನ ಪ್ರಸರಣಗೊಳ್ಸಿಕೆ ಮತ್ತೆ ಕೆಳದಿ ಅರಸರ ದಂಡನಾಯಕರ ನೇತೃತ್ವಲಿ ದಕ್ಷಿಣ ಕನ್ನಡಕ್ಕೆ ಕಳ್ಸಿಕೊಟ್ಟೊ. ಈ ರೀತಿಲಿ ಬಂದ ಲಿಂಗಾಯತ ಮೂಲದ ದಂಡನಾಯಕರ್‍ಲಿ ಕೂಜುಗೋಡು ಕುಟುಂಬದವ್ರ ಮೂಲ ಪುರುಷ ತಿಮ್ಮನಾಯಕ, ಬಲ್ನಾಡ್ನ ದಂಡನಾಯಕ, ಉಲ್ಲಾಲ್ತಿ, ಕದ್ರಿ, ವಿಟ್ಟಲ, ಕಂದ್ರಪಾಡಿಲಿ ನೆಲೆಕಂಡ ಪುರುಷ ಜೋಗಿಗ ಬಲ್ಲಡ್ಕದ "ಕಬರ್" ಬಳಿಗಳ ಮೂಲ ಪುರುಷ ಕುಮಾರಸ್ವಾಮಿ ಮುಖ್ಯ ಆದಂವ.

ಇದ್ಕೆ ಪೂರಕ ಆಗಿ ಗೌಡರ ಶುಭಕಾರ್ಯಗಳ್ಲಿ ಊರ್ ಗೌಡನ ಆಚರಣಾ ಘೋಷಣೆ ಹಿಂಗೆ ಇದ್ದದೆ "ಅರಮನೆಯವರೆ (ಇಕ್ಕೇರಿ ರಾಜ ಕುಟುಂಬದವರೆ) ಗುರುಮನೆಯವರೆ (ಶೃಂಗೇರಿ ಮಠದವರೆ) ಹತ್ತು ಕುಟುಂಬ ಹದಿನೆಂಟು ಗೋತ್ರದ ಬಂಧು–ಬಾಂಧವರೆ, ಕಟ್ಟೆಮನೆ ಮಾಗಣೆಮನೆ ಮತ್ತೆ ಇಲ್ಲಿ ನೆರ್‌ದಿರುವ ನೆಂಟರಿಷ್ಟರ್‍ಲೂ, ಬಂದು ಕೂಡಿರುವ ನೆಂಟರಿಷ್ಟರ್‍ಲೂ ಕೇಳಿಕಂಡ್ ನಿಮ್ಮೆಲ್ರ ಅನುಮತಿಯೊಂದ್ಗೆ ಶುಭ ಕಾರ್ಯನ ನಡೆಸುವಂಥವೇ..."

ಇದರ್‌ಂದ ಸ್ಪಷ್ಟ ಆದು ಏನ್ ತೇಳ್ರೆ ಇಂದಿಗೂ ಈ ಗೌಡ ಸಮುದಾಯದವು ತಮ್ಮ ರಕ್ತ ಸಂಬಂಧಿಗ ಮತ್ತೆ ಪೋಷಕರೂ ಆದ ಕೆಳದಿ (ಇಕ್ಕೇರಿ) ನಾಯಕರ್ಗೂ, ಶೃಂಗೇರಿ ಮಠದ ಗುರುಗಳ್ಗೂ ವಂದನೆಗಳ್ನ ಸಮರ್ಪಿಸಿಕಂಡ್ ಶುಭ ಕಾರ್ಯಗಳ್ನ ಸುರುಮಾಡುವೆ.

ಕೆಳದಿ ಕವಿ ಲಿಂಗಣ್ಣ ತನ್ನ ಹಳೆಗನ್ನಡ "ನೃಪವಿಜಯ" ಕಾವ್ಯಲಿ ಈ ಗೌಡರ ವಲಸೆನ ಒಂದು ಸಾಮ್ರಾಜ್ಯದ ಚಕ್ರವರ್ತಿಯ ದಂಡಯಾತ್ರೆ ತಾ ವಿವರಿಸುಟ್ಟು.

ಗೌಡರ ವಲಸೆ ಪ್ರಕ್ರಿಯೆ ತುಳುನಾಡ್ನ ಕೆಳದಿ ಅರಸರ ಜಾತಿ ಮೂಲ ಕಾರಣ ಆಗಿರ್ದು ತಾ ಡಿ.ಜಿ. ನಡ್ಕರ ಅಭಿಪ್ರಾಯ ಕೂಡ. ಗೌಡ್ರು ಕೆಳದಿ ಅರಸರ ಕಾಲಲಿ ಬಹು ಸಂಖ್ಯೆಲಿ ವಲಸಿಗರಾಗಿದ್ದೋ ತಾ ಕೊಡುವ ಕಾರಣ ಪರಸ್ಪರ ಒಂದೇ ಜಾತಿಯ ಮೂಲದವು ತಾ. ಕೆಳದಿಯ ಅರಸರ್ ಗಂಗ, ಒಕ್ಕಲಿಗ, ಮೂಲದ ಲಿಂಗಾಯಿತ ಮತಸ್ಥರಾಗಿ ಗುರುತಿಸಿಕಂಡವು. ಈ ಬಗ್ಗೆ ಶ್ರೀ ಪೂವಪ್ಪಕಣಿಯೂರುನವು ತಮ್ಮ ಕೃತಿ "ಮೌಖಿಕ ಸಂಕಥನ" ಲಿ ವಿವರವಾಗಿ ಚರ್ಚಿಸಿಯೊಳೊ. ಲಿಂಗಾಯಿತ ಮತಸ್ಥರ್ ಗೌಡರಾಗಿ ಪರಿವರ್ತನೆಯಾಗಿರ್ದು ಸುಳ್ಯ ಮತ್ತೆ ಹರಿಹರ ಪಲ್ಲತಡ್ಕ ಪರಿಸರಲಿ ಉಟ್ಟು.

ಸುಳ್ಯದ ಬಳ್ಪ ತ್ರಿಶೂಲಿನಿ ದೇವಸ್ಥಾನದ ಹತ್ರ ಕ್ರಿ.ಶ. 1562ರ ಶಾಸನವೊಂದು ಕೆಳದಿ ನಾಯಕ ರಾಜವಂಶದ ಸ್ಥಾಪಕ ಚೌಡಪ್ಪ ಮತ್ತೆ ಭದ್ರಪ್ಪರ ಹೆಸ್ರ್‌ನೊಟ್ಟಿಗೆ "ಗವಡ" ಉತ್ತರ ಪದನ ಉಲ್ಲೇಖಿಸಿದೆ.

ಕೆಳದಿ ಸದಾಶಿವ ನಾಯಕನ (ಕ್ರಿ.ಶ. 1544–1565) ಕಾಲದ ಶಾಸನಲಿ ಚವುಡಗೌಡರ ಮಕ್ಕ ಸದಾಶಿವ ನಾಯಕ ಕುಕ್ಕೆ ಸುಬ್ರಾಯದೇವ ಅಮೃತ ಪಡಿಗಾಗಿ ಇಮಾರು ಗದ್ದೆಯ ರಾಜ ಕಂದಾಯ ಬಾಕಿ ಮಾಡಿ ಸುಬ್ರಹ್ಮಣ್ಯ ದೇವಸ್ಥಾನಕ್ಕೆ ದತ್ತಿ ಬುಟ್ಟಿತ್ತ್ ತಾ ವಿವರಿಸಿದೆ. (ಮೈಸೂರು ಗೆಜೆಟಿಯರ್ 1931 ನಂ:347–48) ಕೆಳದಿ ಅರಸರ್ ಗೌಡ ಸಮುದಾಯಕ್ಕೆ ಸೇರಿದವು. ವಿಜಯನಗರದರಸರ ಮಾಂಡಲೀಕರಾಗಿ ತುಳುನಾಡ್ನ ಅಧಿಕಾರ ಕೆಳದಿ ಅರಸರ್‌ಗೆ ಸಿಕ್ಕಿತ್.

ಕೆಳದಿಯ ಗೌಡ ಮೂಲದ ಒಂದನೇ ವೆಂಕಟಪ್ಪ ನಾಯಕನ (ಕ್ರಿ.ಶ. 1613) ದಾಳಿಯ ಪರಿಣಾಮಂದ ತುಳು ನಾಡ್ನ ಜೈನ ಬಲ್ಲಾಳರ್ ಶಿಶಿಲ, ಬೆಳ್ಳಾರೆ, ಕಾಂತಮಂಗಲ, ಬದ್ಯಡ್ಕ, ಕುಂಬ್ಳೆ, ಕಾಸರಗೋಡು ಪ್ರದೇಶಗಳ್ನ ಕಳಕಂಡೋ (ಗಣಪತಿರಾವ್ ಐಗಲ್ 2004) ವಿಜಯನಗರದರಸರ ಸದಾಶಿವರಾಯ ಕೆಳದಿಯ ಅರಸ ಸದಾಶಿವನಾಯಕಂಗೆ ಇಡೀ ತುಳು ನಾಡ್ನ ಬುಟ್ಟುಕೊಟ್ಟು (ಕೆ.ಪಿ. ರಮೇಶ 1968–104) ಹೊಯ್ಸಳ ಮತ್ತೆ ವಿಜಯನಗರ ಕಾಲಲಿ ಜೈನರ್ ಮತ್ತು ಮಾಧ್ವರ್ ಪ್ರಸಿದ್ಧಿಗೆ ಬಂದೊ. ಬಂಗೇರ ಮೊದಲಾದ ಮಾಂಡಲೀಕ ಅರಸಂಗೆ ಸಹಾಯಕರಾಗಿ ಅನೇಕ ಬಲ್ಲಾಳರಿದ್ದೊ, ಒಕ್ಕಲಿಗ ಮೂಲ ಶೈವಮತೀಯ ಕೆಳದಿಅರಸರ ಸಂದರ್ಭದ ತುಳು ನಾಡ್‌ಲಿ ಈ ಜೈನ ಬಲ್ಲಾಳರ್ ನಾಶ ಆದೊ (ಕೆ.ಪಿ. ರಮೇಶ್–1968) ತಾ ಚಾರಿತ್ರಿಕ ಸಂಶೋಧಕರ್ ತಿಳ್ಸಿಯೊಳೊ.

ಸುಳ್ಯ ಮತ್ತೆ ಪುತ್ತೂರು ಮಾಗಣೆಗಳ್ನ "ಮಾತೃ ಪ್ರಧಾನ ಸಂತತಿ"ನ ಅಷ್ಟ ಬಲ್ಲಾಳ್ತಿಗ ಆಳಿಕಂಡಿದ್ದ್, ಇವರ ಭೂ ಆಸ್ತಿ ಅಧಿಕಾರ ದೇವಸ್ಥಾನಗಳ ಉಸ್ತುವಾರಿ ಇತ್ಯಾದಿಗ ನಾವ್ಗೆ ಬಲ್ಲಾಳರ ಕಾಲಂದ ಬಾತ್‌ತ, ಪ್ರಾಚೀನತಾ ಗುರುತಿಸಿಕಂಡಿರೋ ಗೌಡ ಮನೆತನಗ ಮೌಖಿಕ ಸಂಕತನಗ ಸಾಕ್ಷಿಯಾಗಿ ನಿರೂಪಿಸಿಯೊಳೋ.

ತಲಕಾಡ್‌ನ ಗಂಗರಸರ್ಗೂ ತುಳುನಾಡ್ನ ಪ್ರಾಚೀನ ಅಲೂಪರಸರ್ಗೂ ರಾಜಕೀಯ ಸಂಬಂಧ ಇತ್ತ್ ತಾ ಹೇಳಿಕೆ ಕೊಂಬಾರು ಬೋಳ್ನಡ್ಕದ ವೀರ ಕಲ್ಲ್‌ನ ಸ್ವರೂಪ ಲಕ್ಷಣಗ ಗಂಗರಸರ ಕಾಲದ ವೀರಗಲ್ಲುಗಳ್ಗೆ ಹತ್ರಲಿ ಇದ್ದಂಗೆ ಉಟ್ಟು (ಪೂವಪ್ಪ ಕಣಿಯೂರ್ 2009). ಗಂಗರ್ ಕೊಡಗ್‌ನ ಮತ್ತೆ ಚಿಕ್ಕಮಗಳೂರ್ನ ಆಳ್ದ ಕುರಿತು ಶಾಸನ ಆಧಾರಗ ಉಟ್ಟು (ಕೆ.ವಿ. ರಮೇಶ್–1984). ಗಂಗರಸರ್ ಕ್ರಿ.ಶ 350ರ್‌ಂದನೇ ಜೈನ ಮತ್ತು ಶೈವ ಸಂಪ್ರದಾಯಸ್ತರಾಗಿದ್ದೊ. ಗಂಗರಾಜ ಚಾವುಂಡರಾಯ ಶ್ರವಣಬೆಳಗೊಳಲಿ ಗೊಮಟೇಶ್ವರನ ವಿಗ್ರಹ ಪ್ರತಿಷ್ಠಾಪಿಸಿತ್ (ಕ್ರಿ.ಶ 978–995) ಈ ಹೊತ್ತ್‌ಲಿ ದಕ್ಷಿಣ ಕನ್ನಡಲಿ ಕೂಡ ಜೈನ ಸಂಪ್ರದಾಯ ಪ್ರಸಾರ ಆಕೆ ಸುರು ಆತ್. ಆಳರಸರ್, ಬಲ್ಲಾಳರ್ ಇದರಿಂದ ಪ್ರಭಾವಿತರಾದೊ.

ಗೌಡರ ಪ್ರಸರಣದ ಬಗ್ಗೆ ದಕ್ಷಿಣ ಕನ್ನಡಲಿ ಪ್ರಚಲಿತ ಇರುವ ಭೂತಾರಾಧನೆಯ ಪಾಡ್ದನಗಳ್ಲಿ ಸ, ಮೌಖಿಕ ಐಹಿತ್ಯಗಳಿಂದನೂ ವಿವರಗ ತಿಳ್ದ್ ಬಂದದೆ. ಶುರುನ ವಲಸೆ ಕ್ರಿ.ಶ. ಸುಮಾರು 1530ರ್ಲಿ ಈಗಿನ ಸಕಲೇಶಪುರ ತಾಲೂಕಿನ ಕೆಂಚಮ್ಮನ ಹೊಸಕೋಟೆನ ಗೌಡ ಸಮುದಾಯ ಇಕ್ಕೇರಿ ಸಂಸ್ಥಾನದ ದಂಡನಾಯಕ ಲಿಂಗಾಯತ ಮತಾವಲಂಬಿ ತಿಮ್ಮನಾಯಕನ ನೇತೃತ್ವಲಿ ಸುಬ್ರಹ್ಮಣ್ಯಕ್ಕೆ ಕಳುಸಿಲ್ಪಟ್ಟೊ. ಬಾಳುಗೋಡ್ನ ರತ್ನಪುರದ ಬಲ್ಲಾಳ ಕೊಲ್ಲಲ್ಪಟ್ಟದೆ. ಈ ರೀತಿಂದ ಗೌಡರು ಸುಬ್ರಹ್ಮಣ್ಯ, ಹರಿಹರ, ಪಲ್ಲತಡ್ಕ, ಕೊಲಮೊಗ್ರು, ಸುಬ್ರಹ್ಮಣ್ಯ ದೇವಸ್ಥಾನದ ಸಂಕೇಶ ಅಧಿಕಾರಿಯಾಗಿ, ಇಕ್ಕೇರಿ ನಾಯಕ ಪ್ರತಿನಿಧಿಯಾಗಿ ನೇಮಿಸಲ್ಪಟ್ಟದೆ. ತಿಮ್ಮನಾಯಕ ಕಜ್ಜೋಡಿ ತೇಳೋ ಗೌಡ ಕುಟುಂಬದ ಗೂಡೆನ ಮದ್ವೆ ಆಗಿ ಪ್ರತಿಷ್ಠಿತ ಕೂಜುಗೋಡು ಕುಟುಂಬದ ನಾಯರ್ ಗೋತ್ರದ ಮೂಲ ಪುರುಷ ಆದೆ. ಕೂಜುಗೋಡು ಮನೆ ಸುಳ್ಯ ಪರಿಸರದ ಗೌಡ ಜನಕ್ಕೆ ಕಟ್ಟೆ ಮನೆ ಆದೆ.

ಇದಾದ ಕೆಲಸಮಯಲಿ ಇನ್ನೊಂದು ಸೊಲ್ಪ ಗೌಡ ಕುಟುಂಬಗ ಇಕ್ಕೇರಿ ದಂಡನಾಯಕನ ನೇತೃತ್ವಲಿ ಕುಕ್ಕೆ ಪಟ್ಟಣಕೆ (ಸುಬ್ರಹ್ಮಣ್ಯ) ಬಂದು ಸೇರುವೆ. (ಅಂದಾಜ್ ಕ್ರಿ.ಶ 1535) ಆ ಸಂದರ್ಭಲಿ ಕುಕ್ಕೆ ಪಟ್ಟಣ ಆಗಿನ ಮಟ್ಟದ ದೊಡ್ಡ ಪಟ್ಟಣ ಆಗಿತ್ತ್. ಸುಬ್ರಹ್ಮಣ್ಯ ದೇವಸ್ಥಾನದ ಸುತ್ತ ಬೆಳ್ದಿತ್ತ್. ಇವರ್ಲಿ ಇಕ್ಕೇರಿ ರಾಜರ್‌ಂದ ಹಂಗೆ ಶೃಂಗೇರಿ ಮಠಂದ ಸನ್ನದು ಕೊಡಲ್ಪಟ್ಟಿತ್ತ್. ಇಕ್ಕೇರಿ ರಾಜರ ಆಡಳಿತಕ್ಕೆ ಒಳ ಪಟ್ಟ ಕೃಷಿ ಭೂಮಿಗಳ್ನ, ದೇವಸ್ಥಾನದ ಉಸ್ತುವಾರಿ ಅಧಿಕಾರನ ಗೌಡ ಸಮುದಾಯಕೆ ಕೊಡಕುತಾ ಬಲ್ಲಾಳರ್‌ಗೆ ಸೂಚಿಸಿದೊ.

ಇಕ್ಕೇರಿ ಸಂಸ್ಥಾನಂದ ಬಂದ ದಂಡನಾಯಕ ಮತ್ತೆ ಅವನ ತಂಗೆ ಉಲ್ಲಾಳ್ತಿ ತಮ್ಮವ್ಕೆ ನೆಲೆ ನಿಲ್ಲಿಕೆ ಕುಕ್ಕೆ ಪಟ್ಟಣನೇ ಸರಿಯಾದ ಸ್ಥಳ ತಾ ತೀರ್ಮಾನಿಸಿ ಸುಬ್ರಹ್ಮಣ್ಯ ದೇವಸ್ಥಾನದ ಧ್ವಜನ ತಮ್ಮ ಬಿಲ್ಲ್‌ಂದ ಬಾಣ ಹೂಡಿ ಕೆಳಗೆ ಬೀಳ್ಸುವೆ. ಆ ಕಾಲಲಿ ಅಲ್ಲಿ ಮೊದಲೇ ನೆಲೆ ನಿಂತವ್ಕೆ ತಮಗೆ ಶರಣಾಗುವಂಗೆ ಇಲ್ಲರೆ ಯುದ್ದಕ್ಕೆ ಬಂದ್ ಕಾದಾಡಿಕೆ ಆಹ್ವಾನ ಕೊಟ್ಟಂಗೆ. ಈ ಹೊತ್ತ್‌ಲಿ ಅಲ್ಲಿ ಮೊದಲೇ ನೆಲೆ ಹೂಡಿದ್ದ ದೇವಸ್ಥಾನದ ಆಡಳಿತಾಧಿಕಾರಿ ತಿಮ್ಮನಾಯಕ ಹೊಡದಾಗಿ ಬಂದ ದಂಡನಾಯಕನ ವಿಚಾರಿಸಿಕನ ಅಂವ ತಮ್ಮ ಜನಕ್ಕೆ ನೆಲೆ ಬೇಕು ಆದರ್‌ಂದ ಇಲ್ಲಿನ ಅಧಿಕಾರನ ಅವ್ಕೆ ಬುಟ್ಟು ಕೊಡಕೂತಾ, ಈ ಬಗ್ಗೆ ತಮ್ಮಲ್ಲೆ ಸನ್ನದು ಉಟ್ಟು ತಾ ಹೇಳ್ದೆ. ಈ ಹೊತ್ತ್‌ಲಿ ಇತ್ತಂಡವ್ಕೂ ತಾವು ಒಂದೇ ಮೂಲದವು, ಮತ್ತೆ ಇಕ್ಕೇರಿ ನಾಯಕರ್, ಹಂಗೆ ಶೃಂಗೇರಿ ಮಠದವು ತಮ್ಮನ ಕಳ್ಸಿಕೊಟ್ಟದ್ ತಾ ಮನದಟ್ಟಾದೆ. ನಾವು ಈ ಮೊದ್ಲೇ ಇಲ್ಲಿಗೆ ಬಂದ್ ನೆಲೆ ನಿಂತೊಳೊ, ನೀವ್ಗೆ ಇಲ್ಲಿ ನೆಲೆ ಸಿಕ್ಕಲೆ. ನೀವು ಪುತ್ತೂರ್ನ ಮಹಲಿಂಗೇಶ್ವರ ದೇವರತ್ರ ಹೋಗಿ ನೆಲೆ ಕೇಳ್ಕಣಿ ತಾ ಸೂಚನೆ ಕೊಟ್ಟವೆ. ದಂಡನಾಯಕರ್, ದಂಡನಾಯಕಿಯರ್ ಸೂಚನೆಗೆ ಒಪ್ಪಿ ನಾವ್ಗೆ ಈ ಬಗ್ಗೆ ಒಂದು ಪರಿಚಯ ಪತ್ರ ಹಂಗೆ ಗುರ್ತು ಬೇಕು ತಾ ಕೇಳ್ಕನ ಕೆಳ್ಗೆ ಬಿದ್ದ ಧ್ವಜನೇ ಕುರುಹಾಗಿ ತಕಂಡ್ ಹೋಕೆ ಹೇಳುವೆ (ಇದರ್‌ಂದಾಗಿ ಇಂದ್‌ಗೆ ಸ ಸುಬ್ರಹ್ಮಣ್ಯಲಿ ಧ್ವಜ ಮತ್ತೆ ಧ್ವಜ ಸ್ತಂಭ ಇಲ್ಲೆ). ಆಗ ಕಾಜುಕುಜು ತೇಳೋ ಪರಿಚಾರಕ ಧ್ವಜ ಹೊತ್ತ್‌ಕಂಡ್ ಪುತ್ತೂರ್‌ಗೆ ಬಂದ್ ಮಹಾಲಿಂಗೇಶ್ವರ ದೇವರ್ಗೆ (ಇಲ್ಲಿ ಪುತ್ತೂರ್ನ ಮಾಂಡಲೀಕ ಬಂಗರಸ ತಾ ತಿಳ್ಕಂಬದು) ಸನ್ನದು ಮತ್ತೆ ಕುರುಹನ್ನ ಅರ್ಪಿಸಲಾಗಿ ದೇವ್ರು (ಬಂಗರಸರ್) ತನ್ನ ಬಲನಾಡ್‌ಲಿ ನೆಲೆ ಕಂಡ್‌ಕಣಿಕೆ ಸೂಚಿಸಿದೆ. ದಂಡನಾಯಕ ಮತ್ತೆ ಸೋದರಿ ದಂಡನಾಯಕಿ ಉಲ್ಲಾಳ್ತಿ ಬಲನಾಡ್ಲಿ ಈ ಮೊದಲೇ ಅಧಿಕಾರಲಿ ಇದ್ದ ಬಲ್ಲಾಳರ್ಗೆ ಅಧಿಕಾರ ಬುಟ್ಟುಕೊಡಿಕೆ ಕೇಳುವೆ. ಒಪ್ಪದೆ ಇರ್ಕನ ರಕ್ತಸಿಕ್ತ ಸಂಘರ್ಷ ನಡ್ದ್ ದಂಡನಾಯಕ, ಉಲ್ಲಾಳ್ತಿಯರ್ ಬಲ್ಲಾಳ ಸಂತತಿನೇ ನಿರ್ನಾಮ ಮಾಡ್ದೋ ತಾ "ಮೌಖಿಕ ಐಹಿತ್ಯಲಿ" ತಿಳ್ದ್ ಬಂದದೆ.

–ಮುಂದುವರ್ದದೆ.....

**–ಪುತ್ತೂರು ಅನಂತರಾಜ ಗೌಡ**

# 2015ನೇ ಸಾಲ್‌ನ ಗೌರವ ಪ್ರಶಸ್ತಿ ಪ್ರದಾನ

ಕರ್ನಾಟಕ ಅರೆಭಾಷೆ ಸಾಹಿತ್ಯ ಮತ್ತೆ ಸಂಸ್ಕೃತಿ ಅಕಾಡೆಮಿ, ಮಡಿಕೇರಿ ಇವು ಕೊಡಮಾಡ್ವ ವಾರ್ಷಿಕ ಪ್ರಶಸ್ತಿಗೆ ಈ ಸಲ ಮೂರು ಜನ ಮಹನೀಯರ್ ಆಯ್ಕೆ ಆಗೊಳೊ. ಸಂಶೋಧಕ ವಿಧ್ವಾನ್ ಶ್ರೀ ಟಿ.ಜಿ.ಮುಡೂರು, ಸಾಹಿತಿ ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ ಹಂಗೆ ರಂಗಕರ್ಮಿ ಶ್ರೀಮತಿ ದೇವಜನ ಗೀತಾ ಮೋಂಟಡ್ಕ. ನವೆಂಬರ್ 26ರಂದ್ ಹಿಂಬೊತ್ತ್‌ಗೆ ಬೆಂಗಳೂರ್‌ನ ರವೀಂದ್ರ ಕಲಾ ಕ್ಷೇತ್ರಲಿ ನಡ್ದ ಜಂಬರಲಿ ಇವ್ಕೆ 2015ನೇ ಸಾಲ್‌ನ ಗೌರವ ಪ್ರಶಸ್ತಿನ ಕೊಟ್ಟೊ.

ಒಂದು ಭಾಷೆಯ ಪರಿಸರಲಿ ಬೆಳ್ದ್ ಅದನ್ನ ಮೈಗೂಡಿಸಿಕಂಡವ್ ಮಾತ್ರ ಅದರ ಸಮರ್ಥ ವಾರಸುದಾರರಾಕೆ ಸಾಧ್ಯ. ಯಾರೋ ಹೊರಗೆನವ್ ಬಂದ್ ಭಾಷೆನ ಮುನ್ನಡೆಸುದು ಅಸಂಭವ ತಾ ಕೇಂದ್ರ ಸಚಿವ ಡಿ.ವಿ ಸದಾನಂದಗೌಡ ಹೇಳ್ದೊ.



"ಯಾವುದೇ ಭಾಷೆ ಆಗಲಿ, ಅದು ಹಿಂದಿನ ಪರಂಪರೆನ ತನ್ನೊಟ್ಟಿಗೆ ಇಟ್ಟ್‌ಕಂಡಿರಕು. ಇದರ ಜತೇಲೆ ಅದು ಸಮಕಾಲೀನವಾಗಿ ಬೆಳ್ಕಂಡಿರಕು. ಇಂತಹ ಭಾಷೆ ಯಾವತ್ತಿಗೂ ಜೀವಂತ ಆಗಿದ್ದದೆ. ಮಡಿಕೇರಿ–ಸುಳ್ಯ ಸೀಮೆಲಿ ಜೀವಂತವಾಗಿರ್‍ವ ಅರೆಭಾಷೆ ಕೂಡ ಇಂಥ ಒಂದು ಭಾಷೆ ಆವ್ಗು. ಈ ಭಾಷೆಯನ್ನಾಡ್ವ ಸಂಖ್ಯೆ ಐದು ಲಕ್ಷಕ್ಕಿಂತ ಹೆಚ್ಚ್ ಇಲ್ಲೆ. ಆದರೂ ಇವೆಲ್ಲರೂ ಅರೆಭಾಷೆನ ಸಮರ್ಥವಾಗಿ ಬೆಳ್ಸಿಕೊಂಡು ಹೋಗ್ತಾ ಒಳೊ" ತಾ ಹೇಳ್ದೊ.

ಲೇಖಕ ಪುರುಷೋತ್ತಮ ಬಿಳಿಮಲೆ ಮಾತಾಡಿ "ಅರೆಭಾಸೆ ಪೂಮಲೆ ಮೂಲಕ ರಾಮಾಯಣ, ನರಿಯ ಕಥೆಗಳ ಮೂಲಕ ಪ್ರಚಲಿತ ಆವ್ಗು. ಅರೆಭಾಷೆಗೆ ಗಡಿ ಆಚೆ ಸಂಬಂಧನ ನಿರ್ಮಿಸಿ ಕಣಿಕೆ ಸಾಧ್ಯ ಆವ್ಗು ತೇಲ್ರೆ ಭಾಷೆ ಬೆಳ್ದುಟ್ಟು ತಾ ಅರ್ಥ" ತಾ ಅಭಿಪ್ರಾಯ ಪಟ್ಟೊ.

"ಯುನೆಸ್ಕೊ ವರದಿ ಪ್ರಕಾರ ಜಗತ್ತ್‌ಲಿ 7,900 ಭಾಷೆಗ ಉಟ್ಟು. ಅದರ್ಲಿ ನಾಲ್ಕುನೂರಕ್ಕೂ ಹೆಚ್ಚ್ ಭಾಷೆಗ ಭಾರತಲೇ ಉಟ್ಟು. ಕೆಲವ್ ವರ್ಷಗಳ ಹಿಂದೆ ನಮ್ಮಲಿ ಕೊರಗ ಭಾಷೆ ಇತ್ತ್. ಈಗ ಆ ಭಾಷೆನ ಮಾತಾಡ್ವ 25–30 ಜನ ಮಾತ್ರ ಒಳೊ. ಯುವಕರೆಲ್ಲ ತುಳು ಇಲ್ಲರೆ ಕನ್ನಡ ಭಾಷೆನ ಕಲ್ತ್ ಕೊರಗ ಭಾಷೆನೇ ಮರ್‍ತ್ ಬುಟ್ಟೊಳೊ. ಹಂಗಾಗಿ ಅರೆಭಾಷೆ ಎನ್ನುವ ಸಣ್ಣಭಾಷೆನ ಮುತುವರ್ಜಿಂದ ಬಳಸುವ ಮತ್ತು ಉಳ್ಸುವ ಅಗತ್ಯ ಉಟ್ಟು" ತಾ ಅವು ಸಲಹೆ ಕೊಟ್ಟೊ.

ಮುಖ್ಯ ನೆಂಟ್ರಾಗಿ ಬಂದಿದ್ದ ಶಾಸಕ ಕೆ.ಜಿ. ಬೋಪಯ್ಯ ಮಾತಾಡಿ, ಭಾರತಲಿ ಯಾವುದೇ ಒಂದು ಜಾತಿಲಿ ಹುಟ್ಟುದು ಅನಿವಾರ್ಯ, ಹುಟ್ಟಿದ ಜಾತಿನ ಅಭಿಮಾನಂದ ಕಾಣಕು. ಆದರೆ ಇತರ ಜಾತಿಗಳ ಮೇಲೆ ದುರಾಭಿಮಾನ ಇರಕಾದ್ ತಾ ಕಿವಿಮಾತ್ ಹೇಳಿ ಅಕಾಡೆಮಿಯ ಕಾರ್ಯವೈಖರಿಯ ಬಗ್ಗೆ ಪ್ರಶಂಶಿಸಿದೊ. ವಸತಿ ಸಚಿವ ಎಂ.ಕೃಷ್ಣಪ್ಪ ಪ್ರಶಸ್ತಿ ಭಾಜನರಿಗೆ ಶುಭ ಕೋರ್‍ದೊ. ಶಾಸಕ ವಾಸು ಮಾತಾಡಿ, ಅರೆಭಾಷೆಯ ಶ್ರೀಮಂತ ಸಂಸ್ಕೃತಿನ ಕೊಂಡಾಡಿದೊ.

ಜಂಬರದ ಅಧ್ಯಕ್ಷತೆನ ಕರ್ನಾಟಕ ಅರೆಭಾಷೆ ಸಂಸಕೃತಿ ಮತ್ತು ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಕೊಲ್ಯದ ಗಿರೀಶ್ ವಹಿಸಿದ್ದೊ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನಿರ್ದೇಶಕ ಕೆ.ಎ. ದಯಾನಂದ, ಜಂಟಿ ನಿರ್ದೇಶಕ ಮಲ್ಲಿಕಾರ್ಜುನ ಸ್ವಾಮಿ, ಅಕಾಡೆಮಿ ನಿಕಟ ಪೂರ್ವ ಅಧ್ಯಕ್ಷ ಎನ್.ಎಸ್. ದೇವಿಪ್ರಸಾದ್, ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ ಅಧ್ಯಕ್ಷ ಪದ್ಮಾ ಕೋಲ್ಚಾರ್, ಬೆಂಗಳೂರು ಗೌಡ ಸಮಾಜದ ಅಧ್ಯಕ್ಷ ಅಮ್ಮವನ ವಾಸು, ಬಿಬಿಎಂಪಿ ಜಂಟಿ ಆಯುಕ್ತ ಪಾಣತ್ತಲೆ ಪಳಂಗಪ್ಪ, ಅಕಾಡೆಮಿ ಸದಸ್ಯರುಗಳಾದ ಮಂದ್ರೀರ ಮೋಹನ್ ದಾಸ್, ಸದಾನಂದ ಮಾವಾಜಿ, ಬಿ.ಸಿ.ವಸಂತ್, ಪಿ.ಎಸ್. ಕಾರ್ಯಪ್ಪ ಉಪಸ್ಥಿತರಿದ್ದೊ. ಅರೆಭಾಷೆ ಅಕಾಡೆಮಿನ ರಿಜಿಸ್ಟ್ರಾರ್ ಉಮರಬ್ಬ ಸ್ವಾಗತಿಸಿದೊ. ಕೋರನ ಸರಸ್ವತಿ ನಿರೂಪಿಸಿ, ಡಾ.ಪೂವಪ್ಪ ಕಣಿಯೂರು ವಂದಿಸಿದೊ.




ಅರೆಬಾಸೆನ ಹಿರಿಯ ಲೇಖಕ ವಿದ್ವಾನ್ ಟಿ.ಜಿ.ಮುಡೂರು ಹಂಗೆನೆ ಜಾನಪದ ತಜ್ಞೆ ಬೈತಡ್ಕ ಜಾನಕಿ ಬೆಳ್ಯಪ್ಪ ಇವ್ಕೆ 2015ನೇ ಸಾಲ್‌ನ ಗೌರವ ಪ್ರಶಸ್ತಿನ ಪ್ರದಾನ ಮಾಡಲಾತ್. ರಂಗಕರ್ಮಿ

ದೇವಜನ ಗೀತಾ ಮೋಂಟಡ್ಕ ಅವು ಕಾರಣಾಂತರಗಳ್‌ಂದ ಜಂಬರಕೆ ಬಾಕೆ ಆಗದ್ರ್‌ಂದ ಅವ್ಕೆ ಸುಳ್ಯಲಿ ನಡ್ದ "ಗೌಜಿ" ಜಂಬರಲಿ ಪ್ರಶಸ್ತಿ ಪ್ರದಾನ ಮಾಡಲಾತ್.

ಪ್ರಶಸ್ತಿ ಸಮಾರಂಭದ ಆದಂಗೆ ಆಹ್ವಾನಿತ ತಂಡಗಳ್‌ಂದ ಲಾಯ್ಕದ ಸಾಂಸ್ಕೃತಿಕ ಕಾರ್ಯಕ್ರಮಗ ನಡ್ತ್.

**ಈ ತಿಂಗಳ ಸಾಧಕರ ಸಂಚಿಕೆಲಿ** ಅರೆಭಾಷೆ **ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ 2015 ರ ಸಾಲಿನ ಗೌರವ ಪ್ರಶಸ್ತಿ ಪಡ್ದ 3 ಜನ ಸಾಧಕರ ಪರಿಚಯನ ಮಾಡಿಕೊಟ್ಟವೆ.**




**ಟಿ.ಜಿ ಮುಡೂರು**

ತಮ್ಮಯ್ಯಗೌಡ ಮುಡೂರು 24–11–1927ರಂದ್ ಕೇರಳಕ್ಕೆ ಸೇರ್ದ ಮುಡೂರು ಎಂಬ ಊರ್‌ಲ್ಲಿ ಸುಬ್ಬಯ್ಯಗೌಡ ಮತ್ತೆ ಬಾಲಕ್ಕ ಅವರ ಮಂಙ ಆಗಿ ಹುಟ್ಟಿದೊ. ಮದರಾಸ್‌ಲಿ ವಿದ್ವಾನ್ ಪರೀಕ್ಷೆ ಮುಗ್ಸಿ ಮುಂದೆ ಮೈಸೂರು ವಿಶ್ವವಿದ್ಯಾಲಯಂದ ಅವು ಎಂ.ಎ (ಕನ್ನಡ) ಮತ್ತೆ ಬಿ.ಎಡ್, ಡಿಗ್ರಿ ಮುಗ್ಸಿದೊ.

1948ರ್‌ಲ್ಲಿ ಮಾಸ್ಟರಾಗಿ ಕೆಲ್ಸಕೆ ಸೇರ್ದ ಅವು 1982ರ್‌ಲ್ಲಿ ಪಂಜ ಜೂನಿಯರ್ ಕಾಲೇಜ್‌ಲಿ ಕೆಲ್ಸ ಮಾಡಿಕಂಡ್ ಇರ್ಕನ ನಿವೃತ್ತಿ ಪಡ್ಡೊ. ಸಾವಿರ ಸಾವಿರ ಮಕ್ಕಳ್ಗೆ ಪಾಠ ಹೇಳ್ದ ಟಿ.ಜಿ ಮುಡೂರು ಅವು ಇಂದುನೂ ಯುವ ಪೀಳಿಗೆಗೆ ವಿಭಿನ್ನ ಬಗೆಲಿ ಪಾಠ ಹೇಳ್ತನೇ ಒಳೊ.

ಕೇವಲ ಗುರುಗಳಾಗದೆ ಸಾಹಿತ್ಯ ಸೇವೆಲಿ ವಿಭಿನ್ನವಾಗಿ ಇವು ತೊಡಗಿಸಿಕೊಂಡವು. 1948ರ್‌ಂದ ಮೊದಲೇ ಬರ್ಯೆಕೆ ಸುರುಮಾಡ್ದ ಇವು 'ಕಾಜಾಣ' ಕಾವ್ಯ ನಾಮಲಿ ತಮ್ಮ ಬರಹನ ಪತ್ರಿಕೆಲಿ, ಇತರ ಸಂಚಿಕೆಗಳ್ಲಿ ಪ್ರಕಟ ಮಾಡ್ಯೊಳೊ. ಇವು ಮಾಡ್ದ ಮುಖ್ಯ ಕೆಲ್ಸತೇಳ್ರೆ ಪ್ರಕಟಣಾ ಸಂಸ್ಥೆನ ಹುಟ್ಟುಹಾಕಿದ್. 'ಕಣ್ ಕನಸು ತೆರೆದಾಗ' ತಾ ಒಂದು ಪುಸ್ತಕ ಇದರ ಫಲವಾಗಿ ಹೊರ ಬಂದುಟು.

ಆ ಕಾಲಲಿ ಅವು ಪಂಜ ಪರಿಸರಲಿ ಸಾಹಿತ್ಯದ ಕೆಲ್ಸ ಮಾಡಕೂಂತ ಹೇಳಿ 'ಸಂಗಮ ಸಾಹಿತ್ಯ ಮಾಲೆ'ನ ಕಲ್ಮಡ್ಕಲಿ ಸ್ಥಾಪನೆ ಮಾಡ್ಕೊಂಡೊ. ಅದರ ಜೊತೆಲಿ ಪಂಜಲಿ ಪ್ರತಿಮಾ ಬಳಗ ಮಾಡಿ, ಮೇಲೆ ಹೇಳ್ದ ಪುಸ್ತಕನ ಅಲ್ಲಿಂದ ಪ್ರಕಟ ಮಾಡ್ಡೊ. ಒಟ್ಟಿಗೆ ಯರ್ಮುಂಜರಾಮಚಂದ್ರರ್‌ಗೆ ಹೆಸ್ರ್ ತಂದುಕೊಟ್ಟ 'ಚಿಕಿತ್ಸೆಯ ಹುಚ್ಚು ಮತ್ತೆ ಇತರ ಕತೆಗ' (1954) ಅಲ್ಲಿಂದನೇ ಪ್ರಕಟ ಆತ್. 'ಕಣ್ ಕನಸು ತೆರೆದಾಗ' ಪುಸ್ತಕಲಿ ಪಂಜ–ಕಲ್ಮಡ್ಕ ಪರಿಸರಲಿ ಬರಿವ ಸುಮಾರ್ ಜನರ ಕತೆಗನೂ ಇದ್ದೊ. ಪ್ರಖ್ಯಾತ ಕಾದಂಬರಿಕಾರ ಕುಳಕುಂದ ಶಿವರಾಯ (ನಿರಂಜನ) ಕೂಡಾ ಇದ್ದೊ. ಟಿ.ಜಿ. ಮುಡೂರು ಕಂಡ ಕನ್ಸ್‌ಂತೇಳ್ರೆ ಅಕ್ಷರ ಜಗತ್ತ್‌ಂದ ಹೊರಗುಳ್ದ ಸಮುದಾಯದ ಜನ ಬರೆಯೊಕುಂತೇಳ್ವ ಮುತುವರ್ಜಿ ಆಗಿತ್ತ್. ಆ ಕೆಲ್ಸಲಿ ಅವು ಯಶಸ್ಸ್ ಕಂಡೊಳೊ. ಇದರ ಪ್ರೇರಣೆಂದ ಕೆಲವ್ ಜನ ಬರೆಯೊದರ್‌ಲ್ಲಿ ಹೆಸರ್ ಪಡ್ದೊಳೊ. ಕೆ. ರಾಮಚಂದ್ರ, ಸಚ್ಚಿದಾನಂದ (ಚಿರಂತನ) ಹಂಗೆ ಕೆರೆಕ್ಕೋಡಿ ಗಣಪತಿ ಭಟ್ ಇವರೊಟ್ಟಿಗೆ ಕೆಲ್ಸ ಮಾಡ್ಯೊಳೊ. ಸಂಗಮ ಕಲಾ ಸಂಘ ಇವೇ ಕಟ್ಟಿದ ವೇದಿಕೆ. ಯಕ್ಷಗಾನಕ್ಕಾಗಿ ಈ ವೇದಿಕೆ ಹೆಸರ್‌ವಾಸಿಯಾಗಿತ್ತ್. ಬೆಳ್ತಂಗಡಿಲಿ ಮಾಸ್ತರಿಕೆ ಮಾಡ್‌ಕನ ಕಾಜಾಣ, ಅಜ್ಜಾವರಲಿ ಗೀತಪ್ರಕಾಶನಂತೇಳ್ವ ಪ್ರಕಟಣಾ ಸಂಸ್ಥೆನ ಹುಟ್ಟು ಹಾಕಿ ಪ್ರಕಾಶನ ಕಾರ್ಯನ ಇವು ನೆರವೇರ್‌ಸ್ತಿದ್ದೊ.

ಮುಡೂರು ಮಾಸ್ಟ್ರಿಗೆ ಸಾಹಿತ್ಯದ ಒಟ್ಟಿಗೆ ಜಾನಪದದ ಮೇಲೆ ಕೂಡಾ ಬಾರೀ ಪ್ರೀತಿ ಇತ್ತ್. ಅಂದ್ ಹಳ್ಳಿ ಹಾಡ್, ಕತೆಗಳ ಮೇಲೆ ಪ್ರೀತಿ ಇದ್ದ ಕಾಲ ಅಲ್ಲ, ಆದ್ರೂ ಅವುಕೆ ಅದರ ಮಹತ್ವ ಗೊತ್ತಿತ್. ಹಂಗೆನೇ ಅವು 1950ರ ದಶಕಲಿ 'ಹೊಸಕೆರೆ ಹೊನ್ನಮ್ಮ' ಅಂತ ಒಂದು ನೇಜಿ ಹಾಡ್ ನ ಸಂಗ್ರಹ ಮಾಡ್ಡೊ. ಅದ್ ಕನ್ನಡಲಿ ಮುಂದೆ ಬಾರೀ ಮನ್ನಣೆಪಡ್ದ 'ಕೆರೆಗೆ ಹಾರ' ತಾ ಹೆಸರ್‌ನ ಕಥನ ಕಾವ್ಯದ ನಮೂರ್ನ ಪಠ್ಯ. ಆ ಕಾಲಲಿ ಪಂಜ ಪರಿಸರಲಿ ಅದರ ಓದದವೇ ಇರಿಕಿಲೆ. ಎಷ್ಟೋ ಸಾಲೆಗಳ್ಲಿ ಮಕ್ಕ ಅದರ ನಾಟಕ ಮಾಡೊಳೊ. ಮುಡೂರರ ಬೇರೆ ಕೆಲವ್ ಪುಸ್ತಕಗಂತೇಳ್ರೆ–ಕಾಡ ಮಲ್ಲಿಗೆ, ಹೊಸತುಕಟ್ಟು, ಕುಡಿಮಿಂಚು, ಪ್ರಗತಿಯಕರೆ (ಇವೆಲ್ಲಾ ಪದ್ಯ ಪುಸ್ತಕಗ), ಅಬ್ಬಿಯ ಮಡಿಲು (ಕಾದಂಬರಿ), ಜೀವದಯಾಷ್ಟಮಿ (ತರ್ಜುಮೆ), ಧಾರಾ ಪಯಸ್ವಿನಿ (ಬರಹಗಾರರ ವಿಳಾಸ), ನಂದಾ ದೀಪ, ಶ್ರೀಮತಿ ಶಿವಕುಮಾರಿ, ಕೇರಳ ಕುಮಾರಿ, ಸಖಿ, ಅಚ್ಚರಿಯ ಅರಳೆಲೆ, ಮಾಧ್ಯಮಾ (ನಾಟಕಗ), ಇನ್ಸೂರಳಿಯ (ಹಾಸ್ಯ).

ಮುಡೂರು ಮಾಸ್ಟ್ರ್ ಆಕಾಶವಾಣಿಗೆ ಕೆಲವ್ ನಾಟಕಗಳ ಬರ್ದೊಳೊ. ಅವುಂತೇಳ್ರೆ ಹುತ್ತದಲ್ಲಿ ಹೂ, ದಯೆಯದಾಂಗುಡಿ ಮತ್ತೆ ಅಮರಕಲ್ಯಾಣಕ್ರಾಂತಿ.

ಮುಡೂರು ಅವ್ಕೆ ಹಳಗನ್ನಡ, ಇಂಗ್ಲಿಷ್ ಮತ್ತೆ ಸಂಸ್ಕೃತ ಸಾಹಿತ್ಯದ ಮೇಲೆನೂ ಒಳ್ಳೆ ತಿಳುವಳಿಕೆ ಇತ್ತ್. ಅವುಗಳ ಓದಿದ ಆಧಾರಲಿ ಅವು ಮುಕುಟೋರು ಭಂಗ, ಸಾವೊಲಿದ ಸಾವಿತ್ರಿ (ಛಂದೋ ನಾಟಕಗ), ಗುರುವನಗುಡಿ, ಸೊನ್ನೆಯಿಂದ ಸೊನ್ನೆಗೆ ಮತ್ತೆ ಹೃದಯ ರೂಪಕ (ಗೀತರೂಪಕಗ) ಇವ್ಗಳ ಬರ್ದೊ. ಇಷ್ಟು ಮಾತ್ರ ಅಲ್ಲದೆ ಅವು ಸಿಡಿಲ ಮರಿ ಅಶ್ವತ್ಥಾಮನ್ ಮತ್ತು ಮೋಹನ ಮುರಳಿ (ಖಂಡಕಾವ್ಯಗ), ಪ್ರಥಮ ಸ್ವಾತಂತ್ರ್ಯ ಸಮರ, ಕೋಟಿ ಚೆನ್ನಯ್ಯ (ಯಕ್ಷಗಾನ ಪ್ರಸಂಗ) ಪುಸ್ತಗಳ ಹೊರತಂದೊಳೊ.

ಮುಡೂರ್ ಅವು ತುಳುಲಿ ಕೂಡಾ ತುಂಬಾ ಕೆಲ್ಸ ಮಾಡ್ಯೊಳೊ. ಅವು ಬರ್ದ ಜಾಗೀರ್‌ದಾರ್ ಜಗ್ಗೆ, ಗ್ರಾಜ್ಯುವೇಟ್ ಗಿರಿಜ, ಸೀನನ ಸಿನೆಮೋ, ಗಟ್ಯಾಂಡರೊಟ್ಟಿ–ತೆಲ್ವಾಂಡತೆಲ್ಲಾವು, ದೂರೊದ ಕುಕ್ಕು–ಮುಟ್ಟದ ಅಂಬಟೆ, ಗಡಿ ಬಿಡಿ ಗಂಗಯ್ಯೆ, ಕೆಡ್ಡಸೋ, ಬಲಿ ಪರ್ಬೊ, ಜೋಕುಳೆ ಬುದ್ಧಿ, ನಾಟಕೊಗ ಒಂದು ಕಾಲಲಿ ಭಾರೀ ಹೆಸರ್ ಮಾಡ್ದೋ. ಅರೆಬಾಸೆಲಿ ಹಲವು ಬಿಡಿ ಬರಹಗ ರಚಿಸಿರ್ದ ಇವರ 'ಬೊಳ್ವಾಕನ ಮುಗ್ತ್' ಅರೆಭಾಷೆ ನಾಟಕ ಅಕಾಡೆಮಿಂದ ಇತ್ತೀಚ್ಗೆ ಪ್ರಕಟ ಆಗುಟ್ಟು.

ಫ್ರೆಂಚ್ ಕಾದಂಬರಿಕಾರ ವಿಕ್ಟರ್ ಹ್ಯೂಗೋನ ಲಾ ಮಿಸರೇಬಲ್ (ದುಃಖಾರ್ತರು) ಆಧರಿಸಿ ಬರ್ದ 'ಧರ್ಮಾಧಿಕಾರಿಯ ದೀಪ ಸ್ತಂಭಗಳು' ನಾಟಕನ ಅವು 1968ರ್ಲೆ ವೇದಿಕೆಗೆ ತಕಂಡ್‌ಬಂದಿದ್ದೊ.

ಸಂಘಟಕರಾಗಿ ಬಾಳ ಹಿಂದೆನೇ ಸಂಗಮ ಕಲಾ ಸಂಗ ಕಟ್ಟಿ ಕೆಲ್ಸ ಮಾಡ್ದ ಇವು ಮುಂದೆ ದ.ಕ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್‌ನ ಸುಳ್ಯ ತಾಲೂಕು ಸದಸ್ಯ ಆಗಿ 15 ವರ್ಷ ಕೆಲ್ಸ ಮಾಡೊಳೊ. ಸುಳ್ಯ ತಾಲೂಕು ಘಟಕ ಆದ ಮೇಲೆ ಅದ್ಕೆ ಮೂರು ವರ್ಷ ಅಧ್ಯಕ್ಷ ಆಗಿ ಕೆಲ್ಸ ಮಾಡ್ದೊ. ಮುಂದೆ ಸುಳ್ಯ– ಅರಂತೋಡು ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷರೂ ಆಗಿದ್ದೊ.

ಮುಡೂರವರ್ದ್ ಅವಿಶ್ರಾಂತ ಬದ್ಕ್, ಅದರ ಫಲ ಆಗ ಪಂಜ ಬಾಪೂಜಿ ಸೇವಾಶ್ರಮ, ಸಾರ್ವಜನಿಕ ಆರಾಧನಾ ಸಮಿತಿ. ಪಂಜ ಪರಿಸರದ ಯುವ ಪೀಳಿಗೆಯೊಟ್ಟಿಗೆ ಸಾಹಿತ್ಯಿಕ, ಸಾಂಸ್ಕೃತಿಕ, ಶೈಕ್ಷಣಿಕ ಚಟುವಟಿಕೆಲಿ ಇಂದ್ ಸ ಕಾರ್ಯ ಪ್ರವೃತ್ತ ಆಗೊಳೊ.

ಟಿ.ಜಿ ಮುಡೂರು ಇವು ಹಲವು ಸನ್ಮಾನ ಪ್ರಶಸ್ತಿಗಳ್ಗೆ ಭಾಜನ ಆಗೊಳೊ. ತಾಲೂಕು, ಜಿಲ್ಲಾ ಮಟ್ಟಲಿ ರಾಜ್ಯೋತ್ಸವ ಪ್ರಶಸ್ತಿನ ಪಡ್ದೊಳೊ. ಹಲವು ಸಮ್ಮೇಳನಗಳ ಪ್ರಶಸ್ತಿನೂ ಸಿಕ್ಕುಟು. ಹಿರಿಯ ತಲೆಮಾರ್‍ನ ಸಾಹಿತ್ಯ ಸೇವಾಸಕ್ತ, ಸೃಜನ ಶೀಲ ಬರಹಗಾರ, ಅಪ್ರತಿಮ ಸಂಘಟಕರಾಗಿ ಗುರುತಿಸಿಕೊಂಡೊಳೊ.

## ಶ್ರೀಮತಿ ದೇವಜನ ಗೀತಾ ಮೋಂಟಡ್ಕ

ಶ್ರೀಮತಿ ಗೀತಾ ಮೋಂಟಡ್ಕ ಇವು ಸುಳ್ಯಲಿ ಮಗ್ಗದ ಮಾಸ್ಟ್ರಂತೇಳಿ ಹೆಸರ್ ಪಡ್ದ ಶ್ರೀಯುತ ದಿ। ಶೇಷಪ್ಪ ಗೌಡ ಮೋಂಟಡ್ಕ ಮತ್ತೆ ಶ್ರೀಮತಿ ವೆಂಕಮ್ಮ ದಂಪತಿಗಳ ಮಗಳಾಗಿ 17–05–1965 ರ್ಲಿ ಜನಿಸಿದೊ. ಇವು ಚಿಕ್ಕಂದ್ರಿಂದನೇ ಕ್ರೀಡಾಸಕ್ತಿ ಹಂಗೆ ರಂಗಾಸಕ್ತಿನ ಬೆಳ್ಸಿಕಂಡ್ ಬೆಳ್ದವು. ಇಂದ್ ಇವು ರಂಗ ನಿರ್ದೇಶಕಿ, ನಟಿ, ಗಾಯಕಿ, ನಾಟಕ, ರಂಗಗೀತಾ ರಚನಗಾರ್ತಿಯಾಗಿ ಹೆಸ್ರ್ ಪಡ್ದೊಳೊ. ಹಿರಿಯ ರಂಗ ಕಲಾವಿದೆಯಾಗಿ ಹೆಸ್ರ್ ಪಡ್ದೊಳೊ. ಹಿರಿಯ ರಂಗ ಕಲಾವಿದೆಯಾಗಿ ಹೆಸ್ರ್ ಪಡ್ದ ಇವು 27 ವರ್ಷಗಳ್‌ಂದ ರಂಗಾಯಣ ಮೈಸೂರು ಇದರ್ಲಿ ಸೇವೆ ಸಲ್ಲಿಸ್ತಾ ಒಳೊ.ಇವು ಸ್ನಾತಕ ಪದವಿನ ನೆಹರು ಮೆಮೋರಿಯಲ್ ಕಾಲೇಜು ಸುಳ್ಯ ಇಲ್ಲಿ ಪಡ್ದ್ ಕಡೆಗೆ ಸ್ನಾತಕೋತ್ತರ ಪದವಿನ ಇತಿಹಾಸ ವಿಷಯಲಿ ಪಡ್ದ್, ಪತ್ರಿಕೋದ್ಯಮ, ಡಿಪ್ಲೊಮ ಮುಗ್ಸಿಕಂಡ್ ಸುರುಲಿ ಕೊಡಗು ಸಂಗಾತಿ ಪತ್ರಿಕೆಲಿ, ಬೆಂಗಳೂರ್‍ನ ದೂರದರ್ಶನ ವಾರ್ತಾ ವಿಭಾಗಲಿ ನಿರ್ಮಾಣ ಸಹಾಯಕಿ ಆಗಿ ಸೇವೆ ಸಲ್ಲಿಸಿಯೊಳೊ. ರಾಜ್ಯ ಸರ್ಕಾರದ ತೂಕ ಮತ್ತು ಅಳತೆ ಇಲಾಖೆಲಿ, ಕೆಲ ಕಾಲ ಸುಳ್ಯದ ರಬ್ಬರ್ ಬೋರ್ಡ್‌ಲಿ ಹಿಂಗೆ ಬೇರೆ ಬೇರೆ ಕಡೆ ಇವು ತಮ್ಮ ವೃತ್ತಿ ಜೀವನ ನಡ್ಸೊಳೊ. ಸರಕಾರಿ ಉದ್ಯೋಗ ಮಾಡುವ ಅವಕಾಶ ಇದ್ದರೂ ಸ ಅದರ್‍ನ ಬುಟ್ಟ್ ತನ್ನ ಆಸಕ್ತಿಯ ರಂಗ ಚಟುವಟಿಕೆನ ಕ್ಷೇತ್ರನನೇ ನೆಚ್ಚಿಕೊಂಡೊ.

ಮಿಮಿಕ್ರಿ ಕಲಾವಿದೆ ಆಗಿ ಸುಮಾರು 600ಕ್ಕೂ ಹೆಚ್ಚ್ ಮಿಮಿಕ್ರಿ ಪ್ರದರ್ಶಗಳ್ನ ಕೊಟ್ಟೊಳೊ. ದೂರದರ್ಶನ ನಾಟಕಗಳ್ಲಿ, ರೇಡಿಯೋ ನಾಟಕಗಳ್ಲಿ, ಹಂಗೆ ಸಂದರ್ಶನ, ಚರ್ಚಾ ಕೂಟಗಳ್ಲಿ ಭಾಗಿ ಆಗೊಳೊ. ಅಂಧ ಮಕ್ಕಳ್ಗೆ ಹೊರತಂದ ಪಠ್ಯಕ್ರಮದ ಸಿ.ಡಿ. ಗಳ್ಗೆ ಧ್ವನಿದಾನ ಮಾಡ್ಯೊಳೊ. ಮಿಮಿಕ್ರಿ ಕಲೆನ ಕರಗತ ಮಾಡಿಕಂಡ ಗೀತಾ ಅವು ಈ ಕಲೆನ ರಂಗ ಚಟುವಟಿಕೆಗಳ್ಲಿ ಪರಿಣಾಮಕಾರಿಯಾಗಿ ಪ್ರಯೋಗಿಸುವಲ್ಲಿ ಯಶಸ್ವಿ ಆಗೊಳೊ.

ಪ್ರಖ್ಯಾತ ಕನ್ನಡ ನಾಟಕ ರಚನಾಕಾರರಾದ ಕಾರ್ನಾಡ್, ಕುವೆಂಪು ಮುಂತಾದವರ ರಚನೆಗಳಾದ ತಲೆದಂಡ, ಶೂದ್ರ ತಪಸ್ವಿ ಮುಂತಾದ ಹಲವು ನಾಟಕಗಳ ಪ್ರಧಾನ ಪಾತ್ರಗಳಿಗೆ ಜೀವ ತುಂಬಿದ ಖ್ಯಾತಿ ಇವರದ್ದಾಗುಟ್ಟು. ಇಂಗ್ಲೀಷ್‌ಂದ ಅನುವಾದಿತ ಒಥೆಲೊ, ಹ್ಯಾಮ್ಲೆಟ್ ನಾಟಕಗಳ್ಲಿ ಸ ಇವು ಮುಖ್ಯಪಾತ್ರನ ನಿರ್ವಹಿಸಿಯೊಳೊ. ದೇಶ ವಿದೇಶಗಳ ನಿರ್ದೇಶಕರೊಟ್ಟಿಗೆ, ತಂತ್ರಜ್ಞರೊಟ್ಟಿಗೆ ಅಭಿನಯ ಮತ್ತೆ ತಾಂತ್ರಿಕ ವಿಭಾಗಲಿ ಕೆಲ್ಸ ಮಾಡಿ ಅಪಾರ ಅನುಭವ ಪಡ್ದೊಳೊ. ಕನ್ನಡದ ಬಿ.ವಿ.ಕಾರಂತ್, ಸಿ.ಜಿ.ಕೆ, ಸಿ.ಬಸವಲಿಂಗಯ್ಯ, ಕ್ರಿಶ್ಚಿಯನ್ ಸ್ಟುಕ್ಲ್ ಇಂತಹ ಶ್ರೇಷ್ಠ ನಿರ್ದೇಶಕರ ನಾಟಕಗಳ್ಲಿ ಪಾತ್ರವಹಿಸಿದ ಅನುಭವ ಶ್ರೀಮತಿ ಗೀತಾ ಅವ್ಕೆ ಉಟ್ಟು. ನವದೆಹಲಿ, ಪಂಜಾಬ್, ಪಶ್ಚಿಮ ಬಂಗಾಳ, ಅಸ್ಸಾಂ ಹಿಂಗೆ ಹಲವುಕಡೆ ರಂಗ ಪ್ರದರ್ಶನಲಿ ಭಾಗಿಯಾಗೊಳೊ. ನಮ್ಮ ದೇಶಲಿ ಮಾತ್ರ ಅಲ್ಲದೆ ಅಮೆರಿಕದ ನ್ಯೂಯಾರ್ಕ್, ಜರ್ಮನಿ, ಆಸ್ಟ್ರೇಲಿಯಾ ಹಿಂಗೆ

ಅಂತರಾಷ್ಟ್ರೀಯ ರಂಗ ಪ್ರದರ್ಶನಲಿ ಸಾ ತಮ್ಮ ಛಾಪುನ ಮೂಡ್ಸಿಯೊಳೊ. 500ಕ್ಕೂ ಹೆಚ್ಚ್ ರಂಗಾಯಣದ ರಂಗ ಚಟುವಟಿಕೆಲಿ ಸಕ್ರಿಯಾ ಆಗಿರುವಂಗೆ ಅಂಧ ಮಕ್ಕಳ್ಗೆ, ವಿಶೇಷ ಚೇತನ ಮಕ್ಕಳ್ಗೆ ಅಭಿನಯ ತರಬೇತಿ, ಕಾಲೇಜ್ ಮಕ್ಕಳ್ಗೆ ರಂಗೋತ್ಸವ, ಅಣಕು ಕಲೆ, ಹವ್ಯಾಸಿ ಕಲಾವಿದರ್ಗೆ ಮಾರ್ಗದರ್ಶನ ಮಾಡ್ತಾ ಬಂದೊಳೊ.

ಹುಟ್ಟು ಪ್ರತಿಭಾವಂತೆ ಆಗಿರ್‍ವ ಶ್ರೀಮತಿ ದೇವಜನ ಗೀತಾ ಮೋಂಟಡ್ಕ ಇವ್ಕೆ ಕರ್ನಾಟಕ ರಾಜ್ಯದ ಅತ್ಯುತ್ತಮ ಯುವ ಕಲಾವಿದೆ, ಕಾಯಕ ರತ್ನ ಪ್ರಶಸ್ತಿ ಹಿಂಗೆ ಇನ್ನೂ ಹೆಚ್ಚ್ ಪುರಸ್ಕಾರಗ ಸಿಕ್ಕುಟು. ಕನ್ನಡ ಕಲಾ ಕೌಸ್ತುಭ, ಕಲಾ ಕುಸುಮ, ರಂಗಕಲಾ ಪ್ರವೀಣೆ ಇತ್ಯಾದಿ ಹತ್ತ್ ಹಲವ್ ಬಿರುದ್ ಸನ್ಮಾನಗ ಸಿಕ್ಕುಟು.

ಶ್ರೀಮತಿ ಗೀತಾ ಮೋಂಟಡ್ಕ ಇವು ರಂಗ ಕಲಾವಿದೆ ಅಷ್ಟೇ ಅಲ್ಲ, ರಂಗ ನಿರ್ದೇಶಕಿನೂ ಹೌದು. ಕಿರಗೂರಿನ ಗಯ್ಯಾಳಿಗಳು, ಶಾಂತಿಗ್ರಾಮ, ನಾಗಮಂಡಲ, ಮೊಲದ ಕೊಂಬು, ಪಾಪುಗಾಂಧಿ ಬಾಪುಗಾಂಧಿ ಮುಂತಾದ ರಂಗ ರೂಪಕಗ ಇವರ ನಿರ್ದೇಶನಲಿ ಹೆಸ್ರ್ ಪಡ್ದೊಳೊ. ಇವು ಕತೆ, ಕವನ ಬರಿವ ಹವ್ಯಾಸನೂ ಸ ಬೆಳ್ಸಿಕಂಡೊಳೊ.

ಕ್ರೀಡೆನೂ ಇವ್ಕೆ ಆಸಕ್ತ ಕ್ಷೇತ್ರನೆ, ಕರಾವಳಿ ಕರ್ನಾಟಕದ ಯಕ್ಷಗಾನಲಿನೂ ಇವು ಇವರ ತೊಡಗಿಸಿಕೊಂಡೊಳೊ. ಜಾನಪದ, ಭಾವಗೀತೆ ಹಾಡುಗಾರ್ತಿ ಆಗಿನೂ ಹೆಸ್ರ್ ಗಳ್ಸಿಯೊಳೊ. ಸುಳ್ಯದ ಅರೆಭಾಷಿಕ ಸಮುದಾಯದ ಮಗಳಾದ ಇವು ಕೊಡ್ಗ್‌ನ ಸೊಸೆ. ಶ್ರೀ ದೇವಜನ ಗಣೇಶ್ ಉತ್ತಯ್ಯನವರ ಸುಖ ದಾಂಪತ್ಯಲಿ ಪುತ್ರಿ ಜಗತಿ ಒಟ್ಟಿಗೆ ಸದ್ಯ ಮೈಸೂರ್‍ಲಿ ನೆಲೆಸಿಯೊಳೊ.

### ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ

ಪ್ರಕೃತಿ ಸಿರಿ ಸಂಪತ್ತ್‌ನ ನೆಲೆಯಾದ ಕೊಡ್ಗ್‌ನ ಆವಂದೂರ್‍ಲಿ ಶ್ರೀಯುತ ಪಟ್ಟಡ ಮುತ್ತಣ್ಣ ಮತ್ತೆ ಶ್ರೀಮತಿ ನೀಲಮ್ಮ ದಂಪತಿಗಳ ಮಗಳಾಗಿ ಹುಟ್ಟಿದ ಶ್ರೀಮತಿ ಜಾನಕಿ ಇವು ನೆಲದ ಸೊಗಡ್‌ನ ಮೈಗೂಡ್ಸಿಕಂಡ ಸಭ್ಯ ಗೃಹಿಣಿ. ಜಾನಪದ ಹಾಡ್, ಶೋಭಾನೆ ಹಾಡ್ ಇದರೆಲ್ಲಾ ಸಂಗ್ರಹಿಸುದು ಮತ್ತೆ ಹಾಡ್ದು ಇವರ ಹವ್ಯಾಸ. ಸೃಜನ ಶೀಲ ಹಾಡ್ನ ರಚಿಸುದು ಇವ್ಕೆ ಭಾರಿ ಪ್ರೀತಿನ ಸಂಗತಿ. ಈ ನೆಲೆಲಿ ಇವು ಕೊಡ್ಗ್‌ನ ಕವಿಯತ್ರಿಯಾಗಿ ಗುರುತಿಸಿ ಕೊಂಡೊಳೊ.

ಪಾರಂಪರಿಕ ಅರೆಭಾಷೆನ ಸಂಸ್ಕೃತಿ ಮತ್ತೆ ಜನಪದ ಆಚರಣೆನ ಉಳ್ಸಿ ಬೆಳ್ಸೊಕುಂತೇಳ್ದು ಇವರ ಕಾಳಜಿ. ಕೊಡ್ಗ್‌ಲಿ ಅಳಿವಿನಂಚ್‌ಲಿ ಇರ್‍ವ ಹುತ್ತರಿ ಕೋಲಾಟ, ಜೋಗಿಯಾಟ, ಬೆಳಕಾಟಗಳ ಮೂಲ ಸಂಸ್ಕೃತಿ ದಾಖಲ್ಸಕುಂತೇಳ್ವ ಉದ್ದೇಶನ ಗ್ಯಾನ ಮಾಡಿಕಂಡ್ ಅರೆಭಾಷೆಲಿ ಇವು ರಚನೆ ಮಾಡ್ದರ ಫಲ ಆಗಿ ಇವರ ಮೂರನೇ ಕೃತಿ 'ಬೇರ್‌ಲಿ ಚಿಗ್‌ರ್' (2015) ಕೃತಿ ರೂಪ ಪಡ್ದುಟ್ಟು.

ಅರೆಭಾಷಿಕ ಸಮುದಾಯನ ಮೇಲ್ನ ಇವರ ಅಪಾರ ಮೋಹ ಕೊಡ್ಗ್ ಹಂಗೆ ದಕ್ಷಿಣ ಕನ್ನಡದ ಭಾಗಕೆ ಸೇರಿರ್‍ವ ಸುಳ್ಯ ಪರಿಸರದ ಅರೆಭಾಷಿಕರ ಮದುವೆಗಳ್ಲಿ ಬಳಕೆಲಿ ಇರ್‍ವ ಸೋಭಾನೆ ಹಾಡ್ನ ಸಂಗ್ರಹದ ರೂಪ ಇವರ ಮೊದಲ ಕೃತಿ 'ಹಸೆಮಣೆ'(2000) ರೂಪ ಪಡ್ದುಟು. ಹಂಗೆ ಅರೆಭಾಷಿಗರ ಸಂಸ್ಕೃತಿಯ ಆಚರಣೆಗಳ ಸಂಗ್ರಹ ಆಗಿ 'ಅಕ್ಷಯ' (2010) ಎರ್‍ಡನೇ ಮುದ್ರಣ ಆಗಿ ರೂಪ ಪಟ್ದುಟು.

ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪನವು ಜಾನಪದ ಹಾಡ್ ಸಂಸ್ಕೃತಿ ಆಚರಣೆನ ಸಂಗ್ರಹಗಾರ್ತಿ ಮಾತ್ರ ಅಲ್ಲ. ಜಾನಪದ ಮೋಡಿನ ಹಾಡ್‌ಗಳ್ನ ರಚನೆ ಮಾಡ್ದ ಕೀರ್ತಿನೂ ಇವ್ಕೆ ಸಂದದೆ. ಅಳಿತಿರ್‍ವ, ಅಳ್ದ್ ಹೋದ ಸಂಗತಿನ ಪುನರ್ ಸೃಷ್ಟಿಸಿ ಅವ್ಕೆ ಜೀವ ತುಂಬಿ ಎಲ್ಲವೂ ತನ್ನಂಗೆ ಬರೆಯಕೂಂತೇಳಿ ಸಂಘ ಸಂಸ್ಥೆಗಳ್ಲಿ ಸಕ್ರಿಯವಾಗಿ ಸೇರಿಕಂಡ್ ಪ್ರೋತ್ಸಾಹ ಮಾಡ್ದೊವು ಇವು. ಜಾನಪದ ಸಂಸ್ಕೃತಿನ ಸಂಗ್ರಹಿಸಿ ಜೋಪಾನ ಮಾಡಿ ಕಿರಿಯವ್ಕೆ ಹೊಸ್ತರ ಕಟ್ಟಿ ಬೆಳ್ಸುವ ಬಗೆನ ತಿಳ್ಸಿಕೊಡುವ ಕಾರ್ಯನ ಇವು ಮಾಡ್ತಾ ಒಳೊ. ಸ್ವತಃ ಜಾನಪದ ಕಲಾವಿದೆ ಆಗಿರ್‍ವ ಇವರ ಬರಹಗ ಇಂದ್ ಕೊಡಗ್ ಭಾಗದ ಜನಮನಗಳ್ಲಿ ಹಾಸ್ ಹೊಕ್ಕಾವುಟ್ಟು, ಇವರ ಹಾಡ್‌ಗ ಹಲ ಜನಪದ ಕಲಾವಿದರ ಕುಣ್ತದ ಹೆಜ್ಜೆ ಗೆಜ್ಜೆಗೆ ಲಯ ಆಗ್ಯೊಳೊ.

ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪನವರ ಅನೇಕ ಚಿಂತನ ಶೀಲ ಬರಹಗ, ವ್ಯಕ್ತಿ ಚಿತ್ರಗ, ನಾಡ್‌ನ ಹಲವು ಪತ್ರಿಕೆಲಿ, ವಿಶೇಷ ಸಂದರ್ಭದ ಸಂಚಿಕೆಗಳ್ಲಿ ಪ್ರಕಟ ಆಗೊಳೊ. ಹಲವ್ ಸ್ಪರ್ಧೆಗಳ್ಲಿ ಬಹುಮಾನ ಪಡ್ದೊಳೊ.

ಪ್ರತಿಭಾ ಶೀಲೆ, ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪನವರ ಸಾದನೆನ ಗುರ್‍ತಿಸಿ ಕೊಡಗ್‌ನ ಗೌರಮ್ಮ ಪ್ರಶಸ್ತಿ (2006), ಮಹಿಳಾ ಲೇಖಕಿ ಪ್ರಶಸ್ತಿ (2007), ಅಂತರಾಷ್ಟ್ರೀಯ ಮಹಿಳಾ ಜಿಲ್ಲಾ ಪ್ರಶಸ್ತಿ (ಜನಪದ ಕಲಾವಿದೆ), ಕಾವ್ಯಶ್ರೀ ಪ್ರಶಸ್ತಿ (2011), ಸುವರ್ಣ ಕರ್ನಾಟಕ ಪ್ರಶಸ್ತಿ (2011) ಹಿಂಗೆ ಬೇರೆ ಬೇರೆ ಪ್ರಶಸ್ತಿಗ ಇವ್ಕೆ ಸಿಕ್ಕುಟು.

ಸಾಹಿತಿ, ಜಾನಪದ ಕಲಾವಿದೆ ಎಲ್ಲಕ್ಕಿಂತ ಮೇಲಾಗಿ ಒಬ್ಬ ಗೃಹಿಣಿಯಾಗಿ ಪ್ರಸ್ತುತ ಮಡಿಕೇರಿಲಿ ಗಂಡ ಪಾಲೂರ್‌ನ ಬೈತಡ್ಕ ಬೆಳ್ಯಪ್ಪನವರೊಟ್ಟಿಗೆ ಸಾಂಸಾರಿಕ ಜೀವನ ನಡ್‌ಸ್ತಾ ಒಳೊ.

**–ಸಂಪಾದಿಸಿದವ್: ಡಾ. ಪೂವಪ್ಪ ಕಣಿಯೂರು**

# ಮದೆನಾಡ್ ಗೌಡ ಸಮಾಜದ ಸಂತೋಸ ಕೂಟ

ಜಿಲ್ಲಾ ಕೇಂದ್ರ ಮಡಿಕೇರಿ ಸುತ್ತಮುತ್ತಲಿ ಅರೆಬಾಷಿಕ ಜನಾಂಗದವು ಹೆಚ್ಚಾಗಿ ಇರ್ವ ಮದೆ, ಬೆಟ್ಟತ್ತೂರು, ಜೋಡುಪಾಲ, 2ನೇ ಮೊಣ್ಣಂಗೇರಿನ ಸೇರ್ಸಿಕಂಡ್ ಹೊಸದಾಗಿ ಮದೆ ಗೌಡ ಸಮಾಜನ ರಚಿಸಿಯೊಳೊ. ಈ ಸಮಾಜದ ಸುರುನ ಕಾರ್ಯಕ್ರಮ ಆಗಿ ಡಿಸೆಂಬರ್ 4 ರಂದ್ ಮದೆ ಗ್ರಾಮದ ಮದೆ ಮಹೇಶ್ವರ ಪದವಿ ಪೂರ್ವ ಕಾಲೇಜ್‌ಲಿ ಜನಾಂಗ ಭಾಂದವ್ಕೆ ಸಂತೋಸ ಕೂಟನ ಏರ್ಪಡಿಸಿದ್ದೋ.



ಸಮಾಜದ ನೂತನ ಅಧ್ಯಕ್ಷರೂ ಹಂಗೆ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರೂ ಆಗಿರ್ವ ಕೊಲ್ಯದ ಗಿರೀಶ್ ಅವರ ನೇತೃತ್ವಲಿ ಸಂತೋಸಕೂಟ ನಡ್ತ್.

ಜಂಬರಲಿ ಗ್ರಾಮೀಣ ಕ್ರೀಡೆನ ಪ್ರತಿಬಿಂಬಿಸೋ ಪೈಪೋಟಿಗ ನಡ್ತ್. ಇದರ್ಲಿ ಮದೆ, ಬೆಟ್ಟತೂರು, ಜೋಡುಪಾಲ, 2ನೇ ಮೊಣ್ಣಂಗೇರಿ ವಿಭಾಗದ ನೂರಾರ್ ಜನ ಬೊಳ್ಪುಂದ ಹಿಂಬೊಡ್ತು ಮುಟ್ಟ ಬೇರೆ ಬೇರೆ ಕ್ರೀಡೆಲಿ ಕುಸಿಲಿ ಪಾಲ್ಗೊಂಡೊ.

ಮದ್ಯಾಹ್ನ ಊಟ ಆದಂಗೆ ಸಾಂಸ್ಕೃತಿಕ ಜಂಬರಗ ನಡ್ತ್. ಅದರೊಟ್ಟಿಗೆ ಮೈಸೂರ್ಲಿ ಉಪನ್ಯಾಸಕರಾಗಿರೋ ಪಟ್ಟಡ ಶಿವಕುಮಾರ್ ಅವು ವಿಚಾರ ಮಂಡಿಸಿದೊ.

ಬೇರೆ ಬೇರೆ ಕ್ಷೇತ್ರಗಳ್ಲಿ ಸಾಧನೆ ಮಾಡ್ದ ಕಾಸ್ಪಾಡಿ ಧನ್ಯ, ಚೆರಿಯಮನೆ ಮೇಘ, ಚಿರಾಂಜಿಮನೆ ಮೋನಿಕ, ಕಾಸ್ಪಾಡಿ ಸಚಿನ್, ಕಾಸ್ಪಾಡಿ ಪ್ರವಿಣ್, ಹುಲಿಮನೆ ಮೋನಿಕ, ಕುದುಕುಳಿ ಮೋನಿಕ, ನಡುಗಲ್ಲು ಲಿಖಿತ್, ಮುದ್ಯನ ನಿತಿನ್, ಅರಂಬೂರು ಕೃತಿಕ್, ಪಳಂಗೋಟು ಪೃಥ್ವಿ, ಮನೋಜ್ ಇವ್ಕೆ ಸನ್ಮಾನ ಮಾಡಲಾತ್.



ಇದ್ಕೂ ಮೊದ್ಲು ಬೊಳ್ಪ್‌ನ ಜಂಬರನ ಮದೆ ಗ್ರಾಮ ಪಂಚಾಯ್ತಿ ಅಧ್ಯಕ್ಷ ಮುದ್ಯನ ಚಂದ್ರಶೇಖರ್ ಅವು ಉದ್ಘಾಟಿಸಿದೊ. ಕಡೆಗೆ ಮಾತಾಡ್ದ ಅವು ಗ್ರಾಮಲಿ ಸಮಾಜದ ಕಟ್ಟಡ ನಿರ್ಮಾಣ ಮಾಡುವ ಅವಶ್ಯಕತೆ ಉಟ್ಟು. ಅದ್ಕೆ ಎಲ್ಲಾ ಸಹಕರಿಸೋಕು ಹಂಗೆನೆ ಪಂಚಾಯ್ತಿ ಕಡೆಂದನೂ ಅಗತ್ಯ ಸೌಲಭ್ಯಗಳ್ನ ಒದಗಿಸಲಾದೆ ತಾ ಹೇಳ್ದೊ.

ಜಂಬರದ ಅಧ್ಯಕ್ಷತೆನ ವಹಿಸಿ ಮಾತಾಡ್ದ ಸಮಾಜದ ಅಧ್ಯಕ್ಷ ಕೊಲ್ಯದ ಗಿರೀಶ್ ಮದೆನಾಡು ವಿಭಾಗಲಿ ಅರೆಭಾಷೆ ಸಮುದಾಯದವು ಅಧಿಕ ಸಂಖ್ಯೆಲಿ ಒಳೊ. ಆದರೂ ಇಲ್ಲಿ ಒಂದು ಗೌಡ ಸಮಾಜ ಅಸ್ತಿತ್ವಕ್ಕೆ ಬಾತ್ಲೆ. ಈಗ ಗ್ರಾಮಸ್ಥರ, ಸದಸ್ಯರ ಪರಿಶ್ರಮಂದ ಗೌಡ ಸಮಾಜ ಸ್ಥಾಪನೆ ಆವ್ಟು, ಮುಂದಿನ ದಿನಲಿ ಈ ಸಮಾಜಕೆ ಜಾಗನ ಗುರ್ತಿಸಿ ಹೊಸ ಕಟ್ಟಡ ಕಟ್ಟೋಕು ಇದ್ಕೆ ಎಲ್ಲರ ಸಹಕಾರ ಅಗತ್ಯ ತಾ ತಿಳ್ಸಿದೊ.



ಸಂತೋಸಕೂಟದ ಅಂಗವಾಗಿ ಗ್ರಾಮೀಣ ಕ್ರೀಡೆನ ನೆನ್ಪಿಸುವ ನಿಟ್ಟ್‌ಲಿ ಗ್ರಾಮೀಣ ಕ್ರೀಡೆ ಹಂಗೆ ಸಾಂಸ್ಕೃತಿಕ ಕಾರ್ಯಕ್ರಮನ ಏರ್ಪಡಿಸಲಾಗುಟ್ಟು ತಾ ಹೇಳ್ದೊ.

ಮುಖ್ಯ ನೆಂಟ್ರಾಗಿ ನಿವೃತ್ತ ಮುಖ್ಯ ಶಿಕ್ಷಕ ನೆರಿಯನ ಸೋಮಯ್ಯ, ಕೆ.ಜಿ ಬೋಪಯ್ಯ, ಕುಶಾಲನಗರದ ಉದ್ಯಮಿ ಉಗ್ರಾಣಿ ಮನೋಜ್ ಕುಮಾರ್, ಅಂತರಾಷ್ಟ್ರೀಯ ಕರಾಟೆ ತರಬೇತುದಾರ ಹುದೇರಿ ಮುತ್ತಪ್ಪ, ಕೊಂಪುಳಿರ ಆನಂದ, 2ನೇ ಮೊಣ್ಣಂಗೇರಿನ ಮುದಿಯಾರು ರಾಘವ ಪಾಲ್ಗೊಂಡಿದ್ದೊ.

ಜಂಬರದ ಸುರುಲಿ ಬಟ್ಯನ ಗಣೇಶ್ ಸ್ವಾಗತಿಸಿ, ಚೆರಿಯಮನೆ ಸಿಂಚನ ಹಂಗೆ ಬಾಳೆಕಜೆ ಸಾಹಿತ್ಯ ಪ್ರಾರ್ಥಿಸಿದೊ. ಉಗ್ರಾಣಿ ದೇವಯ್ಯ ಪ್ರಾಸ್ತಾವಿಕ ಮಾತ್‌ಗಳ ಆಡ್ದೊ ಹುಲಿಮನೆ ಲೋಕೇಶ್ ಸ್ವಾಗತಿಸಿ, ಪಟ್ಟಡ ಹೇಮಂತ್ ನಿರೂಪಸಿ ವಂದಿಸಿದೊ. ಅರೆಭಾಷೆ ಸಾಹಿತ್ಯ ಮತ್ತು ಸಂಸ್ಕೃತಿ ಅಕಾಡೆಮಿ ಪ್ರಾಯೋಜಕತ್ವಲಿ ಸಾಂಸ್ಕೃತಿಕ ಜಂಬರ ನಡ್ತ್.

# ಮನ್ಸುದು ಕೂಸು

ಗೋಣಿಕೊಪ್ಪ ದಸರ ನೋಡ್ದ ಮಣಿ ಮಾರ್ನೆ ದಿನ ಬೆಳ್ಗ್ ಒಂಬತ್ ಗಂಟೆ ಮುಟ್ಟ ಬಸ್ ಸ್ಟ್ಯಾಂಡ್‌ಲೇ ಕುದ್ದಿತ್‌ಗಡ. ಆಕಳ್ಸಿಕಂಡ್ ಎದ್ದಂವ ಅಲ್ಲೆ ಇದ್ದ ನಲ್ಲಿಲಿ ಮುಕಕ್ಕೆ ನೀರ್ ಹಾಕಂಡ್ ಮಾರ್ಕೆಟ್‌ಗೆ ಹೋತ್. ಒಣ್ಗಿಲ್ ಮೀನ್ ಅಂಗ್ಡಿಂದ ಒಂದ್ ಕೇಜಿ ಚಿರಾವ್, ಅರ್ಧ ಕೇಜಿ ಹ್ಯಾಟೆ ಮೀನ್ ಕಟ್ಸಿಕಣ್ತ್. ಕುರಿ ಮಾಸ ಅಂಗ್ಡಿ ಎದ್ರ್ ಗೂಡಂಗ್ಡಿಲಿ ನೈಯಪ್ಪ ಒಟ್ಟಿಗೆ ಬೊಳ್ಳ ಚಾಯ ಕುಡ್ದು ಬೆಳಿಗೆದ್ ಕಾಪಿ ಕುಡಿವ ಶಾಸ್ತ್ರ ಮುಗ್ಸಿತ್. ರೋಡ್ ಬರಿ ಅಂಗ್ಡಿಲಿ ಜನಗ ಹಂದಿ ಪಸ್ನ ಮಾಡ್ತಾ ಇದ್ದೊ. ಹಸಿಮೀನ್ ಅಂಗ್ಡಿ ಹೈದ ಇವನ ನೋಡ್ತಾ ಇತ್ತ್. ಇಲ್ಲಿ ನಿತ್ತರೆ ಹಸಿ ಮೀನ್ ಹಿಡ್ಸಿಬುಡುದುತೇಳಿ ಅಲ್ಲಿಂದ ಬೇಗ ಜಾಗ ಕಾಲಿ ಮಾಡ್ತ್.

ಮಮತ ಟಾಕಿಸ್ ಕಡೆ ಹೋದ ಮಣಿ ಮಾರ್ನಿಂಗ್ ಶೊ ಇಂಗ್ಲಿಷ್ ಸಿನ್ಮ ನೋಡಿ ಮಧ್ಯಾನ ಆಕನ ಬಸ್ ಸ್ಟ್ಯಾಂಡ್‌ಗೆ ಬಾತ್. ಪಳ್ಳಿಗೆ ತಿರ್ಗುವ ರೋಡ್ ಮೂಲೆಲಿ ನಿತ್ತಿದ್ದ ಮಡಿಕೇರಿ ಬಸ್‌ಗೆ ಹತ್ತಿ ಕುದ್ದಂವ ದಸರದ್ ಫ್ಲ್ಯಾಶ್ ಬ್ಯಾಕ್‌ಗೆ ಹೋದೆ. ಒಂದ್ ತೇರ್‌ಲಿ ನವ ಗ್ರಹಗ ಕಲರ್ ಕಲರ್ ಲೈಟ್‌ಗಳ್‌ನ ಭೂಮಿಗೆ ಕಳ್‌ಸ್ತಾ ವೈಕುಂಠಕ್ಕೆ ಪ್ರದಕ್ಷಿಣೆ ಹಾಕುದು, ವೈಕುಂಠಲಿ ಶ್ರೀಮನ್ ನಾರಾಯಣ ನಾಲ್ಕು ಕೈಗಳ್‌ಲಿ ಶಂಖು, ಚಕ್ರ, ಗದೆ, ಹೂವು ಹಿಡ್ಕಂಡ್ ಇಡೀ ಪ್ರಪಂಚಕ್ಕೆ ಆಶೀರ್ವಾದ ಮಾಡ್ತು. ದೇವ್ರುದು ಪ್ರೀತಿ ಕರುಣೆ ತುಂಬಿದ ಕಣ್‌ಗಳ್‌ನ ನೋಡ್ದ ಮಣಿ ದಸರಕ್ಕೆ ಬಂದದ್ ಸಾರ್ಥಕ ಆತೂಂತ ಮನ್ಸುಲೆ ಗ್ಯಾನ ಮಾಡಿಕಣ್ತ್.

ನವ ಗ್ರಹಗಳ್‌ನ ನೋಡಿಕನ ಮಣಿಗೆ ಮಂಗಳ ಗ್ರಹನ ಗ್ಯಾನ ಆತ್. ಗಾಯತ್ರಿ ಮಂತ್ರಲಿ ಒಂದ್ ಮಂತ್ರ ಉಟ್ಟು. "ಶಕ್ತಿ ಹಸ್ತಾಯ ವಿಧ್ಮಹೇ ಭೂಮಿ ಪುತ್ರಾಯ ಧೀಮಹೀ ತನ್ನೊ ಅಂಗಾರಕ ಪ್ರಚೋದಯಾತ್". ನಮ್ಮ ಪೂರ್ವ ಕಾಲದ ಋಷಿಗ ಮಂಗಳ ಗ್ರಹನ ಭೂಮಿದ್ ಪುತ್ರಾಂತ ಹೇಳಿಯೊಳೊ. ಭೂಮಿನ ಬುಟ್ಟರೆ ವಾಸ ಮಾಡಿಕೆ ಆಗುವ ಇನ್ನೊಂದ್ ಜಾಗ ಮಂಗಳ ಗ್ರಹಾಂತ ಋಷಿಗ ಅವರ ತಪಸ್ ಶಕ್ತಿಂದ ತಿಳ್ಕೋಂಡಿದ್ದೋಂತ ಕಂಡದೆ! ಅಪ್ಪ ಅಮ್ಮ ಮಕ್ಕಳ ಮನೆಗೆ ಹೋಗುವಂಗೆ ವಿಜ್ಞಾನಿಗ ಜನಗಳ್‌ನ ಭೂಮಿ ಪುತ್ರನ ಹತ್ರ ಕಳ್ಸುವ ಏರ್ಪಾಡ್ ಮಾಡ್ತಾ ವೊಳೊ.

ದಸರ ಆರ್ಕೆಸ್ಟ್ರಾಲಿ " ಚೆರಿಯ ಮನೆಲ್ ಇಪ್ಪುಳಿಯ, ಬಲ್ಯ ಮನೆಲ್ ಇಪ್ಪುಳಿಯ, ನಲ್ಲ ಮನೆ ಕಟ್ಟಿತಪ್ಪೊಳೆ ಬಪ್ಪುಳಿಯ, ನನ್ನ ನೀನ್ ಮಂಗಲ ಆಪಕ್ ಒತ್ತೊಳಿಯ, ಅರೇ ನನ್ನಾ ನೀನ್ ಮಂಗಲ ಆಪಕ್ ಒತ್ತೊಳಿಯ" ಪಾಟ್ಗೆ ಕುಣ್ದು ಕುಣ್ದು ಮಣಿದ್ ಕೈ ಕಾಲ್ ಬಚ್ಚಿ ಹೋಗಿದ್ದದೆ. ಬಸ್‌ಲಿ ಕುದ್ದ ಮಣಿಗೆ ಸೀಟ್‌ಲಿ ಒರ್ಗಿದೊಂದೆ ಗೊತ್ತ್, ವಿರಾಜಪೇಟೆ ಗಡಿಯಾರ ಕಂಬದ ಹತ್ರ ಬಸ್ ನಿಲ್ಲ್‌ಕನ ಎಚ್ಚರ ಆದ್. ಸಣ್ಣಪ್ಪನ ಸೋಡ ಸಾಪ್‌ಲಿ ಹಾಕಿದ ಎರ್ಡ್ ಔನ್ಸ್ ಬರೀಸ್‌ದ್ ಘಾಟ್ ಬಸ್ ತುಂಬಾ ತುಂಬಿ ಹೋಗಿತ್ತ್!

ಬಸ್ ಕಂಡಕ್ಟರ್ ಅಪ್ಪಂಗಳದ ಅಪ್ಪಿ ಬಂದ್ ಮಣಿನ ಮಾತಾಡ್‌ಸ್ತ್. ಮಣಿ ಮತ್ತೆ ಅಪ್ಪಿ ಒಂದೇ ಶಾಲೆಲಿ ಓದಿದವ್. ಮರದ ಕೊಂಬೆ ಮೇಲೆ ಬಸ್ ಆಟ ಆಡಿಕನ ಬಸ್ ಕಂಡಕ್ಟರ್ ಆಗಿ ಟಿಕೆಟ್ ಟಿಕೆಟ್‌ತ ಸಿಗರೇಟ್ ಪ್ಯಾಕ್‌ನ ಹರ್ದ್ ಕೊಡ್ತಾ ಇದ್ದ ಅಪ್ಪಿ ಇಂದ್ ನಿಜಾಗಿಯೂ ಕಂಡಕ್ಟರ್ ಆಗುಟ್ಟು! ಅಂವ ಕಂಡಕ್ಟರ್ ಆಕೂಂತ ಆಗಲೇ ಮನ್ಸ್‌ಲಿ ಗ್ಯಾನ ಮಾಡಿಕಂಡಿತ್‌ಗಡ.

******

ತಾಯಿಮನೆ ಮುತ್ತಮ್ಮವ್ವ ಸಾಯ್‌ಂಕಾಲ ಆಕನ ಮಣಿನ ಮನೆಗೆ ಬಂದ್ ಐಮರಲಿ ಕುದ್ಕಂಡಿದ್ದವೆ. ಮಣಿದ್ ಹೆಣ್ ಮುತ್ತು ಬಾಡೆಲಿ ದೇವ್ರ್ ದೀಪ ಮಡ್ಗ್ತಾ ಇದ್ದವ್ಳ್ ಹೊರಗೆ ಬಂದ್ ನೆಂಟ್ರ್‌ಗೆ ನೀರ್ ಕೊಟ್ಟ್ ಕಾಲ್ ಹಿಡ್ದ್ ಮಾತಾಡ್ಸಿದೆ. ಕಾಪಿ ಕುಡಿಯಕೆ ಕೊಟ್ಟ್ ಕೈಯಾಲೆ ಬೆಂಚಿಲಿ ಕುದ್ಕಂಡ್ ಅವ್ವನ ಹತ್ರ ಕಷ್ಟ ಸುಕ ಮಾತಾಡ್ಕೆ ಸುರು ಮಾಡ್ದೆ. ಮನೆಗೆ ನೆಂಟ್ರ್ ಬಂದವೆ. ನಮ್ಮ ಕೋಳಿನ ಕೀರಿಯೋ ಪೆರ್ವಣನೋ ಹಿಡ್‌ಬುಡ್ತ್ ನಿಮ್ಮ ಹತ್ರ ಕೋಳಿ ಉಟ್ಟಾಂತ ಅವ್ವ ಕೇಳ್ತ್. ನೆನ್ನೆ ಕೆರೆ ಹತ್ರ ಒಂದ್ ಕುರ್ಕ ಓಡ್ತಾಯಿತ್ತ್ ಅದೇ ಹಿಡ್ದಿರೋಕೂಂತ ಮುತ್ತು ಹೇಳಿಕೆ ಆತ್.

ಕೋಂಬರೆಲಿ ಇದ್ದ ಮಣಿ ಹೊರಗೆ ಬಂದಂವ ಅವ್ವನ ಕಾಲ್ ಹಿಡ್ದ್ ಮಾತಾಡ್‌ಸಿ ಎಲೆ ತಟ್ಟೆ ಮುಂದೆ ಮಡ್ಗಿದೆ. ಹಂಗೇ ಮಾತಾಡಿಕಂಡ್ ಇರ್ಕನ ಬಸ್‌ಲಿ ಅಪ್ಪಿನ ಕಂಡದ್ ಹೇಳಿ, ಅದ್ ಹೆಂಗೆ ಅವ್ವ ಎಲ್ಲವೂ ಗ್ಯಾನ ಮಾಡ್ದಂಗೆ ಆದುಲ್ಲೆ. ಅಪ್ಪಿ ಮಾತ್ರ ಕಂಡಕ್ಟರ್ ಆಕೂಂತ ಗ್ಯಾನ ಮಾಡಿಕಂಡಿದ್ದವ ಕಂಡಕ್ಟರೇ ಆತ್? ಅಂವ ಕಲೆಕ್ಟರ್ ಆಕೂಂತ ಗ್ಯಾನ ಮಾಡಿದ್ರೆ ಕಲೆಕ್ಟರ್ ಆಗ್‌ತಿತ್ತಾ? ತ ಮಣಿ ಅವ್ವನ ಕೇಳ್ದೆ.

ಅವ್ವ ಹೇಳ್ದೆ – ನರ ಮನ್ಸಂಗೆ ಕಣ್‌ಗೆ ಕಾಂಬುವ ಸರೀರ ಇರ್ರ್ವಂಗೆ ಕಣ್‌ಗೆ ಕಾಂಬದಂಗೆ ಆತ್ಮ ಮತ್ತೆ ಮನ್ಸ್ ಒಳೊ. ಆತ್ಮ ಸರೀರಲಿ ಇರ್ರ್ವ ಜುಂವ(ಪ್ರಾಣ).

ಮನ್ಸ್‌ಲಿ ಬುದ್ದಿ ಮತ್ತೆ ಸೊಯ (ಪ್ರಜ್ಞೆ)ಂತೇಳುವ ಎರ್ಡ್ ಬಲ(ಶಕ್ತಿ)ಗ ಒಳೊ. ಮತ್ತೆ ಮನ್ಸ್‌ಲಿ ಎರ್ಡ್ ತರ ಮನ್ಸ್‌ಗ ಒಳೊ. ಒಂದರ್ನ ಜಾಗ್ರತ ಮನ್ಸೂಂತ ಹೇಳ್ವೆ. ಇನ್ನೊಂದರ್ನ ಸುಪ್ತ ಮನ್ಸೂಂತ ಹೇಳ್ವೆ. ಬುದ್ದಿಂದ ಗ್ಯಾನ ಮಾಡ್ದ ಎಲ್ಲಾ ಸಂಗತಿಗ ಜಾಗ್ರತ ಮನ್ಸುಗೆ ಬಂದ್ ಮರ್ತ್ (ಉಜ್ಜಿ) ಹೋದೆ. ಸೊಯಂದ ಗ್ಯಾನ ಮಾಡ್ದ ಸಂಗತಿಗ ಸುಪ್ತಮನ್ಸ್‌ಗೆ ಬಂದವೆ. ಸುಪ್ತಮನ್ಸ್‌ಗೆ ಬಂದ ಎಲ್ಲಾ ಸಂಗತಿಗ ಪೂರೈಸುವೆ. ಒಳ್ಳೆ ಕೆಲ್ಸ ಮಾಡ್‌ರೆ ಪುಣ್ಯ ಸಿಕ್ಕಿದೆ. ಕೆಟ್ಟ ಕೆಲ್ಸ ಮಾಡ್‌ರೆ ಪಾಪ ಸಿಕ್ಕಿದೆ. ಆ ಪಾಪ ಪುಣ್ಯಗ ಮನ್ಸನ ಹಣೆಬರ ಆದವೆ. ಅದ್ಕೆ ಹಣೆಬರನ ಮನ್ಸುದು ಕೂಸುಂತ ಹೇಳ್ವೆ.

ಕೂಸು ಹುಟ್ಟ್‌ಕನ ಕಾಡ್ ಮನ್ಸನ ಕಾಲದ ಅದರ ಚಾಂಪ, ಚಾಮಿಯವ್ವಂದ ಸುರಾಗಿ ಅಪ್ಪ ಅಮ್ಮನವರೆಗೆನ ಎಲ್ಲಾ ಹಿರಿಯರ ಹಣೇಬರಗಳ್‌ನ ಗಂಟ್ ಕಟ್ಟಿಕಂಡ್ ಬಂದ್ ಇಲ್ಲಿ ಅಳಿಕೆ ಸುರು ಮಾಡ್ದೆ. ಇದ್ ಪಿತ್ರಾರ್ಜಿತ ಹಣೆಬರ. ಕೂಸು ಹುಟ್ಟಿದ ದಿನಂದ ಈ ಘಳಿಗೆವರೆಗೆ ಮಾಡ್ದ ಸ್ವಂತ ಪಾಪ ಪುಣ್ಯಗ ಸ್ವಯಾರ್ಜಿತ ಹಣೆಬರ. ಪಿತ್ರಾರ್ಜಿತ ಮತ್ತೆ ಸ್ವಯಾರ್ಜಿತ ಹಣೆಬರಗ ಮಿಶ್ರ ಆಗಿ ಹೊಸ ಹಣೆಬರ (ಯೋಗ) ಆದೆ. ಅಪ್ಪಿನ ಹೊಸ ಹಣೆಬರಲಿ ಕಂಡಕ್ಟರ್ ಆಗುವ ಸಂಗತಿ ಮಾತ್ರ ಅಚ್ಚು ಆದೆ. ಅಂವನ ಪಿತ್ರಾರ್ಜಿತ ಮತ್ತೆ ಸ್ವಯಾರ್ಜಿತ ಹಣೆಬರಲಿ ಕಲೆಕ್ಟರ್ ಆಗುವ ಸಂಗತಿಯೇ ಇತ್ಲೆ.

ಅಪ್ಪಿನ ಯೋಗಲಿ ಕಂಡಕ್ಟರ್ ಬದ್ಲ್ ಕಲೆಕ್ಟರ್ ಆಗುವ ಸಂಗತಿನ ಬಿತ್ತಿಕೆ ಏನಾದರೂ ಉಪಾಯ ಇತ್ತಾಂತ ಮಣಿ ಅವ್ವನ ಕೇಳ್ದೆ. ಯಾವ ಕೆಲ್ಸ ಮೇಲೂ ಅಲ್ಲ ಕೀಳೂ ಅಲ್ಲ, ಹೆಂಗೂ ಕನ್ಸು ಕಂಡವೆ, ಸಲ್ಪ ದೊಡ್ಡ ಕನ್ಸು ಕಂಡರೆ ಒಳ್ಳೆದ್ ತಾನೆ?

ಅವ್ವ ಹೇಳ್ದೆ – ನಾವು ಸಂಬಾರ ಹೊಡಿ ಮಾಡ್ಸಿಕೆ ಮಿಲ್‌ಗೆ ಹೋದವೆ. ಅಲ್ಲಿ ಬೇರೆ ಯಾರೋ ಮೆಣ್ಸ್‌ನ ಹೊಡಿ ಮಾಡ್ಸಿದ್ದವೆ. ಸಂಬಾರನ ಮಿಷಿನ್ ಒಳಗೆ ಹಾಕಿಕನ ಮಿಷಿನ್‌ಲಿ ಸಿಕ್ಕಿ ಹಾಕಂಡಿರ್‌ವ ಮೆಣ್ಸ್ ಹೊಡಿ ಸಂಬಾರ ಹೊಡಿ ಒಟ್ಟಿಗೆ ಮಿಶ್ರ ಆಗಿ ಬಂದದೆ. ಮೆಣ್ಸ್ ಹೊಡಿ ಮಿಶ್ರ ಆಗದಂಗೆ ಮಾಡಿಕೆ ಸಂಬಾರ ಹಾಕಿಕೆ ಮುಂದೆ ಸಲ್ಪ ಬೇಳೆನ ಹಾಕಿ ಬಾಕಿ ಇರ್‌ವ ಮೆಣ್ಸ್‌ಹೊಡಿನ ಕಾಲಿ ಮಾಡುವೆ. ಪಿತ್ರಾರ್ಜಿತ ಮತ್ತೆ ಸ್ವಯಾರ್ಜಿತ ಹಣೇಬರಗ ಈ ಮೆಣ್ಸ್‌ಹೊಡಿ ಇದ್ದಂಗೆ. ಅಪ್ಪಿ ಕಂಡಕ್ಟರ್ ಆಟ ಆಡುವ ವಯಸ್‌ಲಿ ಬೇಳೆ ಹಾಕಿ ಮೆಣ್ಸ್‌ಹೊಡಿನ ಕಾಲಿ ಮಾಡಕಾಗಿತ್. ಅಂದರೆ ಅವನ ಪಿತ್ರಾರ್ಜಿತ ಮತ್ತೆ ಸ್ವಯಾರ್ಜಿತ ಹಣೇಬರಗಳ್‌ನ ಉಜ್ಜಿ ತೆಗ್ದಿದ್ದರೆ ಹೊಸ ಹಣೆಬರ ಕಾಲಿ ಇರ್‌ತ್ತಾ ಇತ್ತ್ . ಮತ್ತೆ ಕಲೆಕ್ಟರ್ ಆಗುವ ಸಂಗತಿನ ಹೊಸ ಹಣೆಬರಲಿ ಬಿತ್ತಕ್ಕಾಗಿತ್.

ಮನ್ಸನ ಬಾಳ್‌ಲಿ ಈ ಮೆಣ್ಸ್‌ಹೊಡಿ ತರ ಇರ್‌ವ ಪಿತ್ರಾರ್ಜಿತ ಮತ್ತೆ ಸ್ವಯಾರ್ಜಿತ ಹಣೆಬರಗಳ್‌ನ ಪೂಜಿ ತೆಗ್ದ್ ಹೊಸ ಹಣೆಬರನ ಬರಿಯುವ ಸಂಗತಿ ಭಗವದ್ಗೀತೆಲಿ ಉಟ್ಟು. ಶ್ರೀಕೃಷ್ಣ ಪರಮಾತ್ಮ ಆರನೇ ಅಧ್ಯಾಯ "ಆತ್ಮ ಸಂಯಮ ಯೋಗ" ಮತ್ತೆ ಹದ್ನೇಳನೇ ಅಧ್ಯಾಯ "ಶ್ರಧ್ಧಾತ್ರಯ ವಿಭಾಗ ಯೋಗ" ಲಿ ಈ ಸಂಗತಿಗಳ್ನ ಅರ್ಜುನಂಗೆ ವಿವರವಾಗಿ ಹೇಳಿಟ್ಟು.

ಒಂದ್ ಗಾದೆ ಮಾತುಟ್ಟು "ಸಾವಿರ ಟನ್ ಉಪದೇಶಕ್ಕಿಂತ ಒಂದ್ ಗ್ರಾಮ್ ಅನುಷ್ಠಾನ ಲೇಸು". ಗೀತೆನ ಶ್ರದ್ಧೆಂದ ಓದಿ ಅಲ್ಲಿ ಬರ್ದ ಸಂಗತಿಗಳ್‌ನ ತಿಳ್ಕಣಕ್ಕು, ಅಭ್ಯಾಸ ಮಾಡುವ ಕ್ರಮನ ಲಾಯಿಕ್ಕಾಗಿ ಅರ್ಥಮಾಡಿಕಣಕ್ಕು. ಅಭ್ಯಾಸನ ಸುರು ಮಾಡಿ ಪುಸ್ತಕಲಿ ಹೇಳ್ದ್ ನಿಜನಾಂತ ಗ್ಯಾರಂಟಿ ಮಾಡಿಕಣಕ್ಕು. ಒಮ್ಮೆ ಗ್ಯಾರಂಟಿ ಆದಮೇಲೆ ಅಭ್ಯಾಸನ ಮುಂದುವರ್ಸಿ ಮನ್ಸ್‌ನ ಪರಿವರ್ತನೆ ಮಾಡಿಕಂಡ್ ಕಾರ್ಯಸಿದ್ಧಿ ಮಾಡಿಕಣಕ್ಕು..........

ಅವ್ವ ಹೇಳಿಕಂಡ್ ಇರ್ಕನ ಮಣಿದ್ ಮೊಬೈಲ್ ರಿಂಗ್ ಆದೆ. ಮಣಿ ಮೊಬೈಲ್‌ಲಿ ಮಾತಾಡಿಕಂಡ್ ಕೈ ಸನ್ನೆ ಮಾಡಿಕಂಡ್ ಉಬ್ಬುಲು ಹಾಕಿಕೆ ಹೋದೆ. ಮುತ್ತು ಕೈಲಿ ದುಡ್ಡು ಕೊಟ್ಟ ಅವ್ವ ಸೊಸೆ ಬಯ್ಯದು ಬೇಗ ಕೋಳಿ ಹಿಡ್ದ್ ಕೊಡೂಂತ ಹೇಳ್ದೆ. ಮುತ್ತು ದುಡ್‌ನ ಸಂದೂಕಲಿ ಮಡ್ಗಿ ಬಂದವ್ನು ಕ್ಕೊ, ಕ್ಕೊ, ಕ್ಕೋ ತ ಕರ್‌ಕಂಡ್ ಲಾಕಿನ ಹಿಡಿಯಕೆ ಹೋದೆ.

**–ಹೊಳೆಕೆರೆ ರಾಮಪ್ಪ**

---

## ಪೆರಗಾಳ್ದ ತಿಂಗಳ್ಲಿ ಹತ್ತು ಕುಟುಂಬ ಹದಿನೆಂಟು ಗೋತ್ರದ ದೈವಾಧೀನರಾದವರ ವಿವರ

| **ಹೆಸ್ರ್** | **ವಯಸ್** | **ತೀರ್ದ ತಾರೀಖ್** |
|---|---|---|
| ಮುಕ್ಕಾಟಿ (ಪಲ್ಲೇತಿ) ಅಮರಾವತಿ | 65 | 13–12–2016 |
| ಕೇನೇರ ಪ್ರವೀಣ್ | 45 | 16–12–2016 |
| ಮೂಡಗದ್ದೆ ವಿಶ್ವನಾಥ್ | | 27–12–2016 |
| ಕುಂಭುಗೌಡನ ಕುಶಾಲಪ್ಪ | | 2–1–2017 |
| ಹುದೇರಿ ಮೋಹನ್ ಅಪ್ಪಣ್ಣ | | 11–1–2–17 |

*ನಾವ್ಗೆ ಸಿಕ್ಕ ಮಾಹಿತಿ ಪ್ರಕಾರ ಇಲ್ಲಿ ಪ್ರಕಟಿಸಿಯೊಳೊ. ಇನ್ನ್ ಮುಂದೆ ಯಾವುದಾದರ್ ಮಾಹಿತಿಗ ಇದ್ದರೆ ನಮ್ಮೊಂದಿಗೆ ಹಂಚಿಕಣಿ.

# 18ನೇ ವರ್ಸದ ಗೌಡ ಕುಟುಂಬಗಳ ಕ್ರಿಕೆಟ್ ಲಾಂಛನ ಬಿಡುಗಡೆ




ಹತ್ತು ಕುಟುಂಬ ಹದಿನೆಂಟು ಗೋತ್ರದ ಗೌಡ ಜನಾಂಗದವ್ ವರ್ಷಂಪ್ರತಿ ನಡ್ಸಿಕಂಡ್ ಬರ್‍ತಾ ಇರ್‍ವ ಕುಟುಂಬವಾರ್ ಕ್ರಿಕೆಟ್ ಜಂಬರ ಈ ಸಾಲ್‌ನ ನೇತೃತ್ವನ ಪೈಕೇರ ಕುಟುಂಬಸ್ಥರ್ ವಹಿಸಿಕಂಡಿದ್ದ್, ಏಪ್ರಿಲ್ 21ರ್‌ಂದ ಮೇ 21ರವರ್‍ಗೆ ಮಡಿಕೇರಿನ ಜನರಲ್ ತಿಮ್ಮಯ್ಯ ಆಟದ ಬಾಣೆಲಿ ನಡ್ದದೆ. ಈ ಪಂದ್ಯಾವಳಿಯ ಲಾಂಛನನ ಡಿಸಂಬರ್ 21ರ್‌ಂದು ಬಿಡುಗಡೆ ಮಾಡಲಾತ್.

ಕೊಡಗು ಗೌಡ ಯುವ ವೇದಿಕೆ ವತಿಂದ ಪೈಕೇರ ಕುಟುಂಬಸ್ಥರ ಆಶ್ರಯಲಿ ಹಮ್ಮಿಕಂಡಿರ್‍ವ ಕ್ರಿಕೆಟ್ ಜಂಬರದ ಲಾಂಛನನ ಬಿಳಿಗೇರಿನ ಪೈಕೇರ ಐನ್ ಮನೆಲಿ ಕುಟುಂಬದ ಪಟ್ಟೆದಾರ ನಂಜುಂಡ ಅವ್ ಬಿಡುಗಡೆ ಮಾಡ್ದೊ. ಕಡೆಗೆ ಮಾತಾಡ್ದ ಅವು ಕ್ರೀಡಾಕೂಟ ಯಶಸ್ಸಿಗೆ ಎಲ್ಲರ ಸಹಕಾರ ಅಗತ್ಯ ಉಟ್ಟು. ಹಂಗಾಗಿ ಎಲ್ಲವ್ರೂ ಸಹಕರಿಸಕು ತಾ ಕೇಳಿಕಂಡೊ. ಕೊಡಗು ಗೌಡ ಯುವ ವೇದಿಕೆ ಅಧ್ಯಕ್ಷ ಪೈಕೇರ ಮನೋಹರ್ ಮಾದಪ್ಪ ಮಾತಾಡಿ 17 ವರ್ಷಗಳ ಹಿಂದೆ ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ ವತಿಂದ ಗೌಡ ಕುಟುಂಬಗಳ ನಡುವೆ ಕ್ರಿಕೆಟ್ ಪೈಪೋಟಿ ಸುರು ಆವ್ರು. ಅದ್ ಯಶಸ್ವಿ ಆಗಿ ಇಲ್ಲಿ ಮುಟ್ಟು ನಡ್ಕಂಡ್ ಬಂದುಟು. ಹಿಂಗೆ ಮುಂದಕ್ಕೂ ಯುವ ವೇದಿಕೆ ವತಿಂದ ಈ ಕ್ರೀಡಾಕೂಟ ನಡ್ಸುದು ನಮ್ಮ ಸುರುನ ಆದ್ಯತೆ ಇದ್ಕೆ ಎಲ್ಲರೂ ಕೈ ಜೋಡ್ಸಕು ತಾ ಕೇಳಿಕಂಡೊ.




ಈ ವರ್ಸದ ಪೈಕೇರ ಕ್ರಿಕೆಟ್ ಜಂಬರದ ಲಾಂಛನನ ಯುವ ವೇದಿಕೆನ ನಿರ್ದೇಶಕ ಪುದಿನೆರವನ ರಿಶಿತ್ ಮಾದಯ್ಯ ಹಂಗೆ ಕರ್ಣಯ್ಯನ ಅನೂಪ್ ಕಾರ್ಯಪ್ಪ ಅವು ರೂಪಿಸಿಯೊಳೊ. ಅರೆಭಾಷಿಕ ಗೌಡ ಜನಾಂಗ ಬಾಂಧವು ಕೃಷಿಕರಾಗಿದ್ದ್, ಅದರ್‍ಲೂ ಪೈಕೇರ ಕುಟುಂಬಸ್ಥರ್ ಯಾರೂ ಉದ್ಯೋಗಸ್ಥರಲ್ಲ, ಎಲ್ಲವ್ರೂ ಕೃಷಿಕರೇ ಆಗೊಳೊ. ಈ ಹಿನ್ನಲೆಲಿ ಕೃಷಿನ ಬಿಂಬಿಸ್ವ ಲಾಂಛನನ ರೂಪಿಸಿಯೊಳೊ ತಾ ತಿಳ್ಸಿದೊ.

---

# ಮಾಸ್ಟರ್ಸ್ ಕ್ರೀಡಾಕೂಟಲಿ ನಮ್ಮವರ ಸಾಧನೆ

ಬೆಂಗಳೂರ್‍ನ ವಿದ್ಯಾನಗರ ಕ್ರೀಡಾ ಹಾಸ್ಟೆಲ್ ಆಟದ ಬಾಣೆಲಿ ಡಿಸೆಂಬರ್ 10 ಮತ್ತೆ 11ರಂದ್ ನಡ್ದ 37ನೇ ರಾಜ್ಯ ಮಟ್ಟದ ಮಾಸ್ಟರ್ಸ್ ಅಥ್ಲೆಟಿಕ್ ಚಾಂಪಿಯನ್‌ಶಿಪ್ ಕ್ರೀಡಾಕೂಟಲಿ ಕೊಂಪುಳಿ ಇಂದಿರ, ಹೊಸೊಕ್ಲು ಚಿನ್ನಪ್ಪನವು ಇನಾಮ್‌ನ ಪಡ್ಕಂಡೊಳೊ.



ಕೊಂಪುಳಿ ಇಂದಿರ ಅವು ಉದ್ದ ಜಿಗಿತಲಿ ದ್ವಿತೀಯ, 400 ಮೀ ಹರ್ಡಲ್ಸ್ ಲಿ ದ್ವಿತೀಯ ಹಂಗೆನೆ 400 ಮೀ ಓಟಲಿ ಸ ದ್ವಿತೀಯ ಇನಾಮುನ ಪಡ್ಕಂಡೊಳೊ. ಅಂತರಾಷ್ಟ್ರೀಯ ಖ್ಯಾತಿಯ ಮ್ಯಾರಥಾನ್ ಓಟಗಾರ ಹೊಸೊಕ್ಲು ಚಿನ್ನಪ್ಪನವು ಸ ಭಾಗವಹಿಸಿ 5000 ಮೀ. ಹಂಗೆ 10000 ಮೀ ಓಟಲಿ ಮೊದಲ ಇನಾಮುನ ಪಡ್ಕಂಡೊಳೊ.

ಫೆಬ್ರವರಿಲಿ ಹೈದರಾಬಾದ್‌ಲಿ ನಡೆವ ರಾಷ್ಟ್ರಮಟ್ಟದ ಕ್ರೀಡಾ ಕೂಟಕ್ಕೆ ಆಯ್ಕೆ ಆಗೊಳೊ. ಅಲ್ಲಿ ಸ ಇವು ಇಂತದೇ ಸಾಧನೆ ಮಾಡಿ ನಾಡಿಗು ಜನಾಂಗಕ್ಕು ಕೀರ್ತಿ ತರ್‍ಲಿ ತಾ ಹಾರೈಸುವೆ.



# ಮೂರ್ನಾಡ್‌ಲಿ ಹೊಸೊಕ್ಲು ಮನೆಯವ್ರ ಸಂತೋಸ ಕೂಟ

ಕೊಡಗ್‌ನ ಬೇರೆ ಬೇರೆ ಜಾಗಲಿ ನೆಲೆನಿಂತ ಎಲ್ಲಾ ಹೊಸೊಕ್ಲು ಕುಟುಂಬದವ್ರ ಒಟ್ಟು ಸೇರ್ಸಿ ಹೊಸೊಕ್ಲು ಕುಟುಂಬ ತಾ ಒಂದು ಟ್ರಸ್ಟ್ ಸುರು ಮಾಡಿ ಮಡಿಕೇರಿಲಿ ಸ್ವಚ್ಛತಾ ಜಂಬರನ ಆಯೋಜಿಸಿದ್ದೊ. ಈ ವರ್ಸದ ಸಂತೋಸ ಕೂಟನ ಡಿಸೆಂಬರ್ 12ರಂದ್ ಮೂರ್ನಾಡ್‌ನ ಗೌಡ ಸಮಾಜಲಿ ಆಯೋಜಿಸಿದ್ದೋ.

ಈ ಜಂಬರನ ಮಡಿಕೇರಿ ನಗರಸಭೆ ಅಧ್ಯಕ್ಷೆ ಕಾವೇರಮ್ಮ ಸೋಮಣ್ಣನವು ಉದ್ಘಾಟಿಸಿದೊ. ಮುಖ್ಯ ನೆಂಟ್ರ್‌ಗಳಾಗಿ ಮಡಿಕೇರಿ ಗೌಡ ಸಮಾಜದ ಅಧ್ಯಕ್ಷ ಪೇರಿಯನ ಜಯಾನಂದ, ಕೊಡಗು ಗೌಡ ವಿದ್ಯಾಸಂಘದ ಅಧ್ಯಕ್ಷ ಹೊಸೂರು ರಮೇಶ್ ಜೋಯಪ್ಪ, ಕೊಡಗು ಗೌಡ ಯುವ ವೇದಿಕೆ ಮಡಿಕೇರಿ ಇದರ ಕಾರ್ಯದರ್ಶಿ ಕಟ್ಟೆಮನೆ ರೋಶನ್, ಕಾರುಗುಂದ ಗೌಡ ಸಮಾಜದ ಅಧ್ಯಕ್ಷ ಕೊಡಪಾಲ ಗಣಪತಿ, ಮೂರ್ನಾಡ್ ಗೌಡ ಸಮಾಜದ ಅಧ್ಯಕ್ಷ ಚೆಟ್ಟಿಮಾಡ ಕಾರ್ಯಪ್ಪ ಹಂಗೆನೆ ಹೊಸೊಕ್ಲು ಕುಟುಂಬದ ಪಟ್ಟೆದಾರರಾದ ಉತ್ತಯ್ಯ, ಹೊಸೊಕ್ಲು ಕುಟುಂಬ (ರಿ) ನ ಅಧ್ಯಕ್ಷ ಸೋಮಯ್ಯ ಹಂಗೆ ಪದಾಧಿಕಾರಿಗ ವೇದಿಕೆಲಿ ಉಪಸ್ಥಿತರಿದ್ದೊ.

ಜಂಬರನ ಉದ್ಘಾಟಿಸಿ ಮಾತಾಡ್ದ ಕಾವೇರಮ್ಮ ಸೋಮಣ್ಣ ಕುಟುಂಬಗಳ ಒಟ್ಟು ಸೇರ್ಸುದು ಬಾಳ ಕಷ್ಟದ ಕೆಲ್ಸ. ಅಂತದರ‍್ಲೂ ಇಂದ್ ಹೊಸೊಕ್ಲು ಕುಟುಂಬದವ್ ಅದನ್ನ ಮಾಡಿ ತೋರ‍್ಸೊಳೊ. ಇದನ್ನ ಮುಂದುವರ‍್ಸಿಕಂಡ್ ಹೋಕು, ಇಂತ ಸಾಧನೆಗಳ್ಲಿ ಹೆಣ್ಣ್ ಮಕ್ಕಳ ಪಾತ್ರ ಮಹತ್ವದ್ ಆಗಿದ್ದದೇಂತ ಹೇಳ್ದೊ.

ಪೇರಿಯನ ಜಯಾನಂದ ಮಾತಾಡಿ ಹಿಂಗೆ ಎಲ್ಲಾ ಕುಟುಂಬಗ ಒಂದಾಗಿ ಒಗ್ಗಟ್ನ ಸಾಧಿಸಿರೆ ಜನಾಂಗ ಕೂಡ ಗಟ್ಟಿ ಆದೆ ತಾ ಹೇಳ್ದೊ. ಹಂಗೆನೆ ರಾಜ್ಯಲಿ ನಡಿತಾ ಇರೋ ವಿದ್ಯಮಾನಗಳ್ಲಿ ಗೌಡ ಸಮಾಜದ ಪಾತ್ರಗಳ ಬಗೆ ವಿವರಿಸಿದೊ.

ಕೊಡಗು ಗೌಡ ವಿದ್ಯಾಸಂಘದ ಅಧ್ಯಕ್ಷ ಹೊಸೂರು ರಮೇಶ್ ಜೋಯಪ್ಪನವು ಮಾತಾಡಿ ಹೊಸೊಕ್ಲು ಕುಟುಂಬದವ್ಕೆ ಒಂದಷ್ಟ್ ಮಾಹಿತಿಗ ಹಂಗೆ ಮಾರ್ಗದರ್ಶನನ ಕೊಟ್ಟೊ. ಇಂದ್‌ನ ಜನಾಂಗಲಿ ಪಟ್ಟೆದಾರಿಕೆ ತೇಳ್ವಂತದ್ ಹೋಗ್ತಾ ಉಟ್ಟು ಅದನ್ನ ಉಳ್ಸಕು ಹಂಗೆನೆ ಕುಟುಂಬಗಳ್ಲಿ ಹರಿಸೇವೆನ ಮಾಡಿಕಂಡ್ ಇದ್ದರೆ ದೇವರ ಕೃಪೆ ಅವರ ಮೇಲೆ ಇದ್ದದೆ. ಇಂದ್ ಎಷ್ಟೋ ಕುಟುಂಬಗ ತಲತಲಾಂತಗಳ್‌ಂದ ನಡ್ಸದೇ ಬುಟ್ಟಿರುವ ಹರಿಸೇವೆನ ತಮ್ಮ ಐನ್‌ಮನೆಗಲ್ಲಿ ಮತ್ತೆ ಸುರು ಮಾಡೊಳೊ. ಹೊಸೊಕ್ಲು ಕುಟುಂಬದವ್ ಕೂಡ ಒಂದು ಕಡೆ ಐನ್‌ಮನೆ ಕಟ್ಟಿ ಅಲ್ಲಿ ಹರಿಸೇವೆನ ಮುಂದುವರ‍್ಸಿ ತಾ ಹೇಳ್ದೊ.

ಕೊಡಪಾಲ ಗಣಪತಿ ಮಾತಾಡಿ ಕುಟುಂಬನ ಒಂದು ಸೇರ‍್ಸುದು ಅಷ್ಟ್ ಸುಲ್ಬದ ಕೆಲ್ಸ ಅಲ್ಲ, ಇಂದ್ ಹೊಸೊಕ್ಲು ಕುಟುಂಬ ಅದ್ನ ಮಾಡಿ ತೋರ‍್ಸುಟು ಬಾಳ ಕುಸಿ ಆತ್. ಹಿಂಗೆ ಈ ಕುಟುಂಬದ ಸಂಘ ಬೆಳ್ದ್ ಎಲ್ಲವ್ಕು ಮಾದರಿ ಆಕುತಾ ಹೇಳ್ದೊ.

ಕೊಡಗು ಗೌಡ ಯುವ ವೇದಿಕೆನ ಕಾರ್ಯದರ್ಶಿ ಕಟ್ಟೆಮನೆ ರೋಶನ್ ಮಾತಾಡಿ ಸುರುಗೆ ಸಂಘ ಸಂಸ್ಥೆಗ ಜನಾಂಗದ ಒಗ್ಗಟ್ಟ್‌ಗೆ ಶ್ರಮಿಸ್ತಾ ಇದ್ದೋ ಹಂಗೆ ಈಗ ಇಂಥ ಕುಟುಂಬಗ ಒಗ್ಗಟ್ಟಾಗಿ ಜನಾಂಗನ ಮುಂದೆ ತಾಕು ತಾ ಕೇಳಿಕಂಡೊ.

ಹೊಸೊಕ್ಲು ಕುಟುಂಬನ ಒಟ್ಟು ಸೇರ‍್ಸಿಕೆ ಶ್ರಮಿಸಿದ ಹೊಸೊಕ್ಲು ಸೋಮಯ್ಯ, ಹೊಸೊಕ್ಲು ಕುಟುಂಬದ ಪಟ್ಟೆದಾರ ಉತ್ತಯ್ಯ, ಹಂಗೆ ಅಂತರಾಷ್ಟ್ರೀಯ ಮ್ಯಾರಥಾನ್ ಓಟಗಾರ ಹೊಸೊಕ್ಲು ಚಿನ್ನಪ್ಪ ಅವ್ಕೆ ಸನ್ಮಾನ ಮಾಡಲಾತ್.

# ಚಾಮವ್ವ

ಚಳಿ ತಡ್ಕಣಿಕಾಗದ ಚಾಮವ್ವಂಗೆ
ಈ ಗ್ಯಾಸ್ ಕಂಡರೆ
"ಬಂದದೆ ಬಾರಿ ಬಾರಿ ಸಿಟ್ಟ್"
ಪಾಪ ಚಳಿಗಾಲ ಬಾತ್ ತೇಳ್ರೇ
ಚಾಮವ್ವ ಎದ್ದ್ ಬರ್ತಿತ್ತ್ಲೆ
"ಒಲೆ ಬುಡ ಬುಟ್ಟ್"
ಚಳಿಗಾಲಲಿ ಚಾಮವ್ವಂಗೆ
ಒಲೆಮುಂದೆ ಕುದ್ದರೆ ಆದು
"ಮೈ ಬಿಸಿ"
ಪಾಪ ಈಗನ ಸೊಸೆಗೆ
ವ್ಯಸನ ಪಾತ್ರೆಗ
"ಆದವೆಲ್ಲ ಮಸಿ"

# ನಮ್ಮ ಬಾಸೆ

ಮರಿಬಡಿ ಯಾರು
"ನಮ್ಮ ಅರೆಬಾಸೆನ"
ಅರೆಬಾಸೆ ಮಾತಾಡಿಕಂಡೆ
"ಅಮ್ಮ ತಿನ್ನಿಸ್ತಿತ್ತ್ ಅನ್ನ"
ನಮ್ಮ ಭಾಷೆ ಬುಟ್ಟ್ ಇಂಗ್ಲಿಷ್ ಕನ್ನಡ
ಮಾತಾಡ್ರೆ
"ಹೋದೆ ಅರೆ ಗೌಡ್ರ ಮಾನ"
ಮಕ್ಕ ಎಷ್ಟೇ ಕಲ್ತರು
ಕೊಡಿ ಅವ್ಕೆ ಸ್ವಲ್ಪ
"ಅರೆಬಾಸೆ ಜ್ಞಾನ"
ಬನ್ನಿ ಎಲ್ಲವು ಸೇರಿ
ಅರೆಬಾಷೆ ಉಳ್ಸಿಕೆ
"ಕೈ ಜೋಡ್ಸನೋ"

–ಮುಕ್ಕಾಟಿ ರೇಖ ಮೊಣ್ಣಪ್ಪ

# ಸಂಘದ ಗಮ್ಮತ್ತ್

ಬೋಜಕ್ಕನೂ  ಕಾವೇರಿಯಕ್ಕನೂ
ಹಿಂದೆನ ದಿನನೇ ಹೇಳಿಕಂಡ್
ಹುಲ್ಲುಸೊಪ್ಪು ಮಾಡಿಕಂಡ್
ಸಂಘದ ಮೀಟಿಂಗ್‌ಗೇತ ಹೊರಟಿದ್ದೋ

ಮೊನ್ನೆತಂದ ಹೊಸ ಸೀರೆನ
ಎಲ್ಲವ್ಕೂ ತೋರ್‍ನೋಕುಂತೇಳಿ
ಸೀರೆನ ಜರಿ ಕಾಣೊಕುಂತೇಳಿ
ಬೋಜಕ್ಕ ಭಾರೀ ಪೊರ್ಲುಲಿ ಉಟ್ಟಿದ್ದೋ

10 ಗಂಟೆನ ಬಸ್ ಬಾಕನನೇ
ಬೇಗ ಬಾಕೆ ಹೇಳಿಯೊಳಾಂತೇಳಿ
ಮೇಲೆ ಮನೆ ಕಾವೇರಿ ಅಕ್ಕನೊಟ್ಟ್‌ಗೆ
ಪೋಯಿಯಾ ಅಕ್ಕಂತೇಳಿ ಕೇಳಿದ್ದೋ

ಆತ್ ಪೋಯಿತ ಹೇಳ್ದ ಕಾವೇರಿಯಕ್ಕ
ಚೂರು ತಡಮಾಡಿ ಬಂದಿದ್ದೋ
ಬೀಗಹಾಕಿ ಮನೆಂದ ಹೊರ್‍ಡ್‌ಕನ
ಬೋಜಕ್ಕಂಗೆ ಒಲೆಲಿ ಇಸಿದ ಹಾಲ್‌ನೆನ್ಪಾತ್

ಈಗ ಬನ್ನೇತ ಓಡ್ದ ಅಕ್ಕ ಒಳ ಬಾಕನ
ಹಾಲ್ ಆಗಳೇ ಇಳ್ಗಿ ಆಗಿತ್ತ್
ಓಡಿಬಂದ ರಭಸಕ್ಕೆ ಹೊಸ ಚಪ್ಪಲ್
ಆಗಳೇ ತುಂಡಾಗಿತ್ತ್
ಹಳ್ತ್ ಚಪ್ಪಲ್‌ನೇ ಹಾಕಿದ ಬೋಜಕ್ಕ
ಸಂಘಕ್ಕೆ ಬಾಕನ ಹೊತ್ತಾಗಿತ್ತ್

ಅಧ್ಯಕ್ಷರ್ ಇನ್ನೂ ಬಾತ್ಲೇತ ಹೇಳ್ದನನೇ
ಅಧ್ಯಕ್ಷರಾದ ಗಂಗಕ್ಕ ಮೆಲ್ಲನೇ ಬಂದಿದ್ದೋ

ಇಂದ್‌ಂದ ಹೊಸ ಅಧ್ಯಕ್ಷರಾಗಿ
ಭೋಜಕ್ಕ ಆಗಲೀತ ಹೇಳಿದ್ದೋ
ಮನ್ಸ್‌ಲಿ ಭಾರೀ ಖುಸಿಯಾದ ಅಕ್ಕ
ಮೆಲ್ಲನೆ ಬೇಡಪ್ಪಾಂತೇಳಿ ಹೇಳಿದ್ದೊ

ಎರ್‍ಡ್ ಮಾತಾಡಿ ಬೋಜಕ್ಕತ
ಎಲ್ಲವೂ ಅವರ್‍ನೇ ಹೇಳ್ದೊ
ಸಭೆನ ನೋಡ್ಕನ ಭೋಜಕ್ಕನ
ಕೈಲಿದ್ದ ಪರ್ಸುನೂ ಬಿದ್ದೋತು

ಹೆದ್‌ರ್ದ ಬೋಜಕ್ಕ ನಾ ಅಧ್ಯಕ್ಷೆ ಆದುಲೆ
ನಮ್ಮ ಮಾವಂಗೆ ಉಸಾರಿಲ್ಲೇತ
ಎಂದೋ ಸತ್ತ್‌ಹೋದ ಮಾಂವನ
ಅಲ್ಲಿಗೆ ತಂದಿದ್ದೊ

ಬುಡಾದೆ ಜನ ಅವರ್‍ನೇ ಅಧ್ಯಕ್ಷೆ ಮಾಡಿದ್ದೊ
ಮನೆಗೆ ಬಂದ ಬೋಜಕ್ಕ
ಈಗದ ಅಧ್ಯಕ್ಷೆ ನಾನೇಂತೇಳಿ
ಭಾರೀ ಖುಸಿಲಿ ಗಂಡನೊಟ್ಟಿಗೆ
ಹೊಗಳಿಕಣ್ತಿದ್ದೊ.

**–ಕುಡೆಕಲ್ ಸವಿತ**

## ಐನ್ ಮನೆ

ಹೊಸ ಸುದ್ದಿ ಆಗಿ ಬಂದುಟ್ಟು ಐನ್‌ಮನೆ ತೇಳುವ ದೇವಾಲಯ
ಕುಟುಂಬಸ್ಥರ್ ಸೇರಿ ಕಟ್ಟಿಸಿದ ಈ 'ಐನ್‌ಮನೆ'
ಹೊಸ ವಿಷಯಗಳ ಹೊತ್ತು ತಂದುಟ್ಟು ಕೊಂಪುಳಿ ಐನ್‌ಮನೆ
ಎಲ್ಲರ್‍ಲಿ ಉಟ್ಟು ಪ್ರೀತಿ ಪ್ರೇಮ, ವಿಶ್ವಾಸ ನಂಬಿಕೆಗ
ಈಗ ಗೊತ್ತಾಗ್ತಾ ಉಟ್ಟು ಎಲ್ಲವುಕು ಐನ್‌ಮನೆದ್ ಬೆಲೆ
ಐನ್‌ಮನೆದ್ ಅಟ್ಟಲಿ ಇಟ್ಟಿದ್ದವೆ ವೆಂಕಟರಮಣ ದೇವರ ಮುಡ್ಪು
ಕಾರೋಣಕೊಟ್ಟ್ ಗುರು–ಹಿರಿಯರ್‍ನ ನೆನ್ಸ್ ಕಂಡವೆ ಐನ್‌ಮನೆಲಿ
ವರ್ಷ ವರ್ಷ ನಡ್ದೆ ಕೈಲ್‌ಮೂರ್ತ, ಹುತ್ರಿ ಹಬ್ಬ
ಐದು ವರ್ಷಕ್ಕೊಮ್ಮೆ ನಡ್ದದೆ ಹರಿಸೇವೆ, ದೈವದಕೋಲ
ಈ ಎಲ್ಲಾ ಜಂಬರ ನಡ್ದೆ ಕುಟುಂಬಸ್ಥರ ಸಮ್ಮುಖಲಿ
ಜಂಬರದ ಪೂರ್ವಸಿದ್ಧತೆನ ಐನ್‌ಮನೆದ್ ಕೈಯಾಲೆಲಿ ಮಾಡಿವೆ
ಐನ್‌ಮನೆಲಿ 'ಐಮರದ' ಮೇಲೆ ಹೆಣ್ಣ್ ಮಕ್ಕ ಕೂರುವಂಗಿಲ್ಲೆ
ಋತಿಮತಿಯಾದವು ಐನ್‌ಮನೆ ಒಳಗೆ ಹೋಗುವಂಗಿಲ್ಲೆ
ನೆಲ್ಲಕ್ಕಿ ಬಾಡೆಲಿ ದೀಪ ಇಡವು ಗಂಡ್ ಜನಾನೆ ಇಡೋಕುತಾ ಸಂಪ್ರದಾಯ ಉಟ್ಟು
ಇಂತಾ ಐನ್‌ಮನೆಗ ಎಲ್ಲವೂ ಮೂಲೆಗುಂಪಾದೋ
ಐನ್‌ಮನೆನ ಬುಟ್ಟ್ ಬೇರೆ ಬೇರೆ ಮನೆಗಳ ಕಟ್ಟಿಕಂಡೊಳೊ
ಐನ್‌ಮನೆಗ ಬೀಳುವ ಪರಿಸ್ಥಿತಿಗೆ ಬಾತ್
ಅಪ್ಪರ್‍ಲಿ ಸಿಕಕಿತ್ ನೋಡಿ ಕೊಂಪುಳಿ ಐನ್‌ಮನೆಗೆ
ಗುರುಹಿರಿಯರ ಮನಕ್ಕಿಂದ್ ಹರುಷ ತಂದುಟ್ಟು
ಗುರು–ಹಿರಿಯರ ಆಶೀರ್ವಾದಂದ ಐನ್‌ಮನೆಗಾಗಿ ನಾವು ದುಡಿಯೋಕು
ಮುಂದೆನ ಪಿಳ್ಳೆಕಳಿಗೆ ಐನ್‌ಮನೆ ತೇಳಿರೆ ಏನ್‌ತಾ ಗೊತ್ತಾದೆ
ಕಾಪಾಡ್‌ಲಿ ಕುಲದೇವ್ರು ಶ್ರೀ ವೆಂಕಟರಮಣ ದೇವ್ರು
ಒಳ್ಳೆದಾಗ್ಲಿ ಎಲ್ಲವ್ಕೂ, ಊರ್ ನಾಡ್ನ ಜನಕೂ

**–ಕೊಂಪುಳಿ ಇಂದಿರ**

---

**ನಮ್ಮ ಪತ್ರಿಕೆಗೆ ಕತೆ, ಕವನ, ಹನಿಗವನ, ಚುಟುಕು, ಲೇಖನ, ಅನುಭವ ಕಥನ, ಪ್ರವಾಸ ಕಥನ ಹಂಗೆ ಪತ್ರಿಕೆ ಬಗ್ಗೆ ನಿಮ್ಮ ಅನ್ಸಿಕೆ ಅಭಿಪ್ರಾಯ ಗಳ್ನ ಬರೆಯವು ಸಂಪೂರ್ಣ ಅರೆಬಾಸೆಲಿ ಬರ್‍ದ್**

**ಅರೆಬಾಸೆ ಮುಡ್ಪು ಪತ್ರಿಕೆ**
**C/o ವಸಂತ ಟ್ರೇಡರ್ಸ್**
**ಬೈಪಾಸ್ ರಸ್ತೆ, ಗೋಣಿಕೊಪ್ಪ –571213**
**ವಾಟ್ಸಾಪ್‌ಲಿ ಕಳ್ಸಿರೆ: 9535615759 । ಮಿಂಚಂಚೆಲಿ ಕಳ್ಸಿರೆ: arebasepatrike@gmail.com ಗೆ ಕಳ್ಸಿ ಕೊಡಿ**














* Design for permanent Irrigation Pipelines
* One time Investment
* Easy to operate
* We supply your requirement




# ವಸಂತ್ ಟ್ರೇಡರ್ಸ್

ಬೈಪಾಸ್ ರಸ್ತೆ, ವೆಂಕಟಪ್ಪ ಬಡಾವಣೆ, ಗೋಣಿಕೊಪ್ಪಲು, ದ.ಕೊಡಗು 571 123

**Contact : 08274-247661 Mob : 94487 95589, 94485 87968**

ಶಾಖೆ : ಕಕ್ಕೆಹೊಳೆ, ಸೋಮವಾರಪೇಟ್ – 8904145443

E-mail : vasanthtradersgkl@gmail.com